# ಹರಿಹರ ಕವಿಯ

# ಬಸವರಾಜದೇವರ ರಗಳೆ

ಸಂಪಾದಕ :

ಟಿ. ಎಸ್. ವೆಂಕಣ್ಣಯ್ಯ, ಎಂ.ಎ.

ಕನ್ನಡದ ಪ್ರೊಫೆಸರ್, ಮಹಾರಾಜರವರ ಕಾಲೇಜು, ಮೈಸೂರು

ಮೈಸೂರು :

ವೆಸ್ಲಿ ಪ್ರೆಸ್ ಮತ್ತು ಪಬ್ಲಿಷಿಂಗ್ ಹೌಸಿನಲ್ಲಿ ಮುದ್ರಿತವಾದದ್ದು

೧೯೩೮

ಈ ಗ್ರಂಥವು

ನನ್ನ ವಿದ್ಯಾಗುರುಗಳಾದ

**ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.**

ಅವರಿಗೆ

ಭಕ್ತಿಯಿಂದ ಅರ್ಪಿತವಾಗಿದೆ

# ವಿಷಯಾನುಕ್ರಮಣಿಕೆ

# ಪೀಠಿಕೆ

## ವಚನಕಾರರು—ಬಸವಣ್ಣ

ಹನ್ನೆರಡನೆಯ ಶತಮಾನದ ವೀರಶೈವ ವಚನಕಾರರ ಮಾತಿನ ಧೋರಣೆಯನ್ನು ನೋಡಿದರೆ ಅವರು ಒಂದು ಹೊಸಮತವನ್ನು ನೆಲೆಗೊಳಿಸುವ, ಒಂದು ಹೊಸ ಸಮಾಜವನ್ನು ಸ್ಥಾಪಿಸುವ ಕಾರ್ಯದಲ್ಲಿ ಉದ್ಯುಕ್ತರಾಗಿದ್ದರೆಂದು ಬೋಧೆಯಾಗುತ್ತದೆ. ಅವರು ಬೋಧಿಸಿದ ಶೈವಮತವು ಪುರಾತನ ಶೈವಮತದ ತಳಹದಿಯ ಮೇಲೆ ನಿರ್ಮಿತವಾಗಿದ್ದರೂ ಕೆಲವು ಮುಖ್ಯವಿಷಯಗಳಲ್ಲಿ ಅದು ತನ್ನದೇ ಆದ ಒಂದು ವಿಶಿಷ್ಟತೆಯನ್ನು ಪಡೆದಿತ್ತು. ಉದಾಹರಣೆಗೆ, ಷಟ್ಸ್ಥಲ ಸಿದ್ಧಾಂತಾನುಸಾರವಾಗಿ ಸಾಧನಮಾಡುವುದು; ಈ ಸಾಧನೆಯ ಆವಶ್ಯಕ ಅಂಗವಾಗಿ ದೇಹದ ಮೇಲೆ ಲಿಂಗಧಾರಣಮಾಡುವುದು ಇತ್ಯಾದಿ. ಈ ಮತದ ಆದ್ಯಪ್ರವರ್ತಕರಾರು, ಇದು ಯಾವಾಗ ರೂಪುಗೊಂಡಿತು, ಮೊದಲುಮೊದಲು ಹೇಗೆ ಬೆಳೆಯಿತು ಎಂಬುವನ್ನು ಸ್ಪಷ್ಟವಾಗಿ ತಿಳಿಯುವುದಕ್ಕೆ ನಿಷ್ಕೃಷ್ಟವಾದ ಸಾಧನಗಳು ಇನ್ನೂ ದೊರೆತಿಲ್ಲ. ಆದರೆ ವಚನಕಾರರ ಕಾಲಕ್ಕಾಗಲೇ ಕೆಲವರು ಈ ಮತಕ್ಕೆ ಸೇರಿದ್ದರೆಂದು ತೋರುತ್ತದೆ. ಅಂಥವರಲ್ಲಿ ಅನೇಕರು ತಾವು ಅವಲಂಬಿಸಿದ ಹೊಸಮತದ ಮೂಲ ತತ್ವಗಳನ್ನು ಸರಿಯಾಗಿ ಗ್ರಹಿಸದಿದ್ದುದರಿಂದಲೋ, ಗ್ರಹಿಸಿದರೂ ಹಳೆಯ ಅಭ್ಯಾಸಗಳನ್ನು ಬಿಟ್ಟು ಹೊಸವನ್ನು ಆಚರಣೆಗೆ ತರಲು ತಕ್ಕ ಮನೋಬಲವಿಲ್ಲದಿದ್ದುದರಿಂದಲೋ ಆ ಮತಕ್ಕೆ ಹೊಂದದ, ಅನೇಕ ವೇಳೆ ಅದಕ್ಕ ವಿರೋಧವಾದ ಆಚಾರ ವ್ಯವಹಾರಗಳನ್ನು ಅನುಸರಿಸುತ್ತಿದ್ದರು. ಇದರಿಂದ ಆ ಮತಕ್ಕೆ ಸೇರಿದವರ ಆಚಾರ ವ್ಯವಹಾರಗಳಲ್ಲಿ ಒಂದು ದೊಡ್ಡ ಅವ್ಯವಸ್ಥೆಯುಂಟಾಗಿತ್ತು. ವಚನಕಾರರು ಇಂಥ ಜನರಲ್ಲಿದ್ದ ತಪ್ಪು ಭಾವನೆಗಳನ್ನು ಹೋಗಲಾಡಿಸಿ ಸರಿಯಾದುವನ್ನು ಬೋಧಿಸಿ ಅವರ ನಡೆನುಡಿಗಳನ್ನು ತಿದ್ದಿ ಹೊಸ ಆಚಾರಗಳನ್ನು ಅನುಷ್ಠಿಸಲು ಆವಶ್ಯಕವಾದ ಧೈರ್ಯೋತ್ಸಾಹಗಳನ್ನು ಅವರಲ್ಲಿ ತುಂಬಿ ಒಂದು ಸುವ್ಯವಸ್ಥಿತವಾದ ಶಿವಾಚಾರವನ್ನು ನೆಲೆಗೊಳಿಸಬೇಕಾಗಿತ್ತು. ಇಷ್ಟರಿಂದಲೇ ಅವರು ಕೃತಕೃತ್ಯರಾಗುವಂತಿರಲಿಲ್ಲ.

ವಚನಕಾರರು ಅನುಷ್ಠಿಸುತ್ತಿದ್ದ ಮತ್ತು ಇತರರಿಗೆ ಬೋಧಿಸುತ್ತಿದ್ದ ಹೊಸ ಮತವು ಮತಧರ್ಮದ ದೃಷ್ಟಿಯಿಂದಲೂ ಸಾಮಾಜಿಕ ದೃಷ್ಟಿಯಿಂದಲೂ ಹಲವು ವಿಷಯಗಳಲ್ಲಿ ಕ್ರಾಂತಿಕಾರಕವಾಗಿದ್ದುದರಿಂದ, ಮುಖ್ಯವಾಗಿ ಬಹುಕಾಲ ದಿಂದಲೂ ಬೆಳೆದುಬಂದು ಆಳವಾಗಿ ಬೇರುಬಿಟ್ಟಿದ್ದ ವರ್ಣಾಶ್ರಮ ಧರ್ಮದ ಕಟ್ಟುಪಾಡುಗಳನ್ನು ನಿರ್ಮೂಲವಮಾಡುವಂತೆ ಕಂಡುಬಂದುದರಿಂದ, ಸಂಪ್ರ ದಾಯ ಶರಣವಾದ ಹಳೆಯ ಸಮಾಜವು ಕೆರಳಿದ ಉರಗನಂತೆ ಪ್ರತಿಭಟಿಸಿ ನಿಂತಿತ್ತು. ವಚನಕಾರರು ಇತ್ತ ಕಡೆ ಆಗತಾನೆ ಕಣ್ಣುಬಿಡುತ್ತಿದ್ದ, ಅವ್ಯವಸ್ಥೆ ಯಲ್ಲಿದ್ದ, ತಮ್ಮ ಹೊಸ ಸಮಾಜವನ್ನು ಶಿವಾಚಾರದ ಅಸ್ತಿವಾರದ ಮೇಲೆ ಸ್ಥಾಪಿಸಬೇಕಾಗಿತ್ತು; ಅತ್ತ ಕಡೆ ಬಹುಕಾಲ ಬೆಳೆದುಬಂದ ಸುವ್ಯವಸ್ಥಿತವಾದ ಪ್ರತಿಪಕ್ಷದ ಹಳೆಯ ಸಮಾಜದ ದಾಳಿ ಆಘಾತಗಳನ್ನು ತಡೆಗಟ್ಟಬೇಕಾಗಿತ್ತು. ಈ ಉತ್ಕಟ ಪರಿಸ್ಥಿತಿಯಲ್ಲಿ ಆ ವಚನಕಾರರಿಗೆ ಒಬ್ಬ ಧೀರನಾದ ಮುಂದಾಳು ಬೇಕಾಗಿತ್ತು. ಅವರ ಸುದೈವದಿಂದ ಅವರಿಗೆ ಅಂಥ ಒಬ್ಬ ಮುಂದಾಳು ದೊರೆತನು. ಆತನೇ ಭಕ್ತಿಭಂಡಾರಿ ಬಸವಣ್ಣ.

ಪ್ರಖ್ಯಾತರಾದ ಕರ್ಣಾಟಕದ ಧರ್ಮವೀರರಲ್ಲಿ ಬಸವಣ್ಣನೂ ಒಬ್ಬನು. ಆತನು ಮೊದಲು ಬ್ರಾಹ್ಮಣನಾಗಿದ್ದು ಆಮೇಲೆ ಬ್ರಾಹ್ಮಣ್ಯವನ್ನು ನಿರಾಕರಣ ಮಾಡಿ ವೀರಶೈವ ಮತವನ್ನವಲಂಬಿಸಿ ತನ್ನ ಜೀವನವನ್ನೆಲ್ಲ ಆ ಮತದ ಉದ್ಧಾರಕ್ಕಾಗಿ ಧಾರೆಯೆರೆದನು. ತಾನು ಸ್ವತಃ ಪರಮನಿಷ್ಠಾಯುಕ್ತನಾದ ಸಾಧಕನಾಗಿದ್ದು ಅನೇಕ "ಪವಾಡ"ಗಳನ್ನು ಮೆರೆದದ್ದಲ್ಲದೆ ಬಿಜ್ಜಳರಾಯನ ಹತ್ತಿರ ಉನ್ನತಪದವಿಯಲ್ಲಿದ್ದು ತನ್ನ ತನುಧನಮನಗಳನ್ನೆಲ್ಲ ಜಂಗಮಾರಾಧನೆ ಗಾಗಿಯೂ ಮತಪ್ರಚಾರ ಕಾರ್ಯಕ್ಕಾಗಿಯೂ ಸವೆಸಿ ವೀರಶೈವಮತೋ ದ್ಧಾರಕರಲ್ಲಿ ಅಗ್ರಗಣ್ಯನಾದನು. ಆತನ ಜೀವಿತಕಾಲದಲ್ಲಿಯೇ ಆತನ ಕೀರ್ತಿ ನಾಲ್ಕು ಕಡೆಗೂ ಹಬ್ಬಿ ಅನೇಕ ಶಿವಭಕ್ತರು ಆತನ ಸಂದರ್ಶನಕ್ಕಾಗಿ ದೇಶವಿದೇಶ ಗಳಿಂದ ಬರುತ್ತಿದ್ದರೆಂದು ತಿಳಿದುಬರುತ್ತದೆ. ದೈವಭಕ್ತಿಯುಳ್ಳವರೂ ಮಹಿಮ ಸಂಪನ್ನರೂ ಆದವರನ್ನು ಅವತಾರಪುರುಷರೆಂದು ಪರಿಗಣಿಸುವುದು ನಮ್ಮ ಜನರಲ್ಲಿ ಬಹುಕಾಲದಿಂದ ವಾಡಿಕೆಯಾಗಿರುವುದರಿಂದ ಆ ಕಾಲದಲ್ಲಿಯೇ ಶಿವಭಕ್ತರು ಬಸವಣ್ಣನನ್ನು ಅವತಾರಪುರುಷನೆಂದು ಭಾವಿಸಿದ್ದರೆಂಬುದರಲ್ಲಿ ಸಂದೇಹವಿಲ್ಲ. ಬಸವಣ್ಣನ ಕಾಲವಾದಮೇಲೆ ವೀರಶೈವಮತವು ಹಬ್ಬಿದ ಹಾಗೆಲ್ಲ ಆತನ ಕೀರ್ತಿಯೂ ಆತನ ಸಂಬಂಧದ ಕಥೆಗಳೂ ಜನರಲ್ಲಿ ಬೆಳೆಯುತ್ತಾ ಹೋಗಿರ ಬೇಕು.

## ಬಸವಣ್ಣನನ್ನು ಕುರಿತ ವೀರಶೈವ ಪುರಾಣಗಳು

ಬಸವಣ್ಣನನ್ನು ಕಂಡಿದ್ದ, ಆತನ ಕಾರ್ಯಕಲಾಪಗಳನ್ನು ನೋಡಿದ್ದ ಸಮಕಾಲಿಕರಾರೂ ಆತನ ಜೀವನ ಚರಿತ್ರೆಯನ್ನು ಬರೆದಿಡಲಿಲ್ಲ.* ಆತನು ಕಾಲವಾದ ಅನೇಕ ವರ್ಷಗಳ ಮೇಲೆ ವೀರಶೈವ ಕವಿಗಳು ಆತನ ಚರಿತ್ರೆಯನ್ನು ಪುರಾಣರೂಪವಾಗಿ ರಚಿಸಿದರು. ಸ್ವಾಭಾವಿಕವಾಗಿಯೇ ಅವರು ತಮ್ಮ ಸುತ್ತು ಮುತ್ತಿನ ಜನರಿಂದ ತಾವು ಕೇಳಿದ ಕಥೆಯನ್ನು ತಮ್ಮ ಗ್ರಂಥಗಳಲ್ಲಿ ಬರೆದಿಟ್ಟರು. ಜನರ ಬಾಯಲ್ಲಿ ಕಥೆ ಬೆಳೆಯುವಾಗ ಅನೇಕ ಮಾರ್ಪಾಟುಗಳಾಗುವುದು ಸ್ವಾಭಾವಿಕ. ಕವಿಗಳು ಕೂಡ ತಮ್ಮ ಕಾವ್ಯದ ಸೊಬಗನ್ನು ಹೆಚ್ಚಿಸುವುದಕ್ಕಾಗಿಯೋ ಕಥಾನಾಯಕನ ಮಹತ್ವವನ್ನು ಉಜ್ಜ್ವಲಗೊಳಿಸುವುದಕ್ಕಾಗಿಯೋ ಕಥೆಯಲ್ಲಿ ತಮಗೆ ಸೂಕ್ತತೋರಿದಂತೆ ಕೆಲವು ವ್ಯತ್ಯಾಸಗಳನ್ನು ಮಾಡಿಕೊಳ್ಳುವುದು ಅಸಂಭವನಲ್ಲ. ಕಥೆಯನ್ನು ಹರಡಿದ ಜನರಿಗಾಗಲಿ, ಪುರಾಣಗಳನ್ನು ಬರೆದ ಕವಿಗಳಿಗಾಗಲಿ ಬಸವಣ್ಣನ ಅಲೌಕಿಕ ಮಹಿಮೆಯ ಕಡೆ ಗಮನವಿತ್ತೇ ಹೊರತು ಆತನ ಜೀವನದಲ್ಲಿ ನಿಜವಾಗಿ ನಡೆದ ಸಂಗತಿಗಳಾವುವು ಎಂಬುದನ್ನು ತಿಳಿದುಕೊಳ್ಳುವುದರಲ್ಲಿ ಕುತೂಹಲವಿರಲಿಲ್ಲ. ಆದಕಾರಣ ಈ ಪುರಾಣಗಳಲ್ಲಿ ನಿಜವಾಗಿ ನಡೆದ ಸಂಗತಿಗಳೂ ಕಲ್ಪಿತವಾದುವೂ ಕಲಬೆರಕೆಯಾಗಿ ಹೋಗಿರುವುದು ಸ್ವಾಭಾವಿಕವಾಗಿದೆ. ಅಲ್ಲದೆ ಬಸವಣ್ಣನ ಜೀವನಕ್ಕೆ ಸಂಬಂಧಿಸಿದ ಸಂಗತಿಗಳಿಗಿಂತಲೂ ಅದ್ಭುತವಾದ ಪವಾಡಗಳಿಗೆ ಅವುಗಳಲ್ಲಿ ಹೆಚ್ಚಿನ ಸ್ಥಾನ ದೊರೆತಿರುತ್ತದೆ.

ಈಗಿನ ಕಾಲದವರನೇಕರು ಬಯಸುವುದು ಬಸವಣ್ಣನ ಜೀವನ ಚರಿತ್ರೆಗೆ ಸಂಬಂಧಿಸಿದ ನಿಜವಾದ ಘಟನೆಗಳಾವುವು ಎಂಬುದನ್ನು. ಅವರ ಗಮನವಿರುವುದು ಬಸವಣ್ಣನ ಪವಾಡಗಳ ಕಡೆಗಲ್ಲ, ಆತನ ಜೀವನದ ವಾಸ್ತವ್ಯಾಂಶಗಳ ಕಡೆಗೆ. ಅವರು ಬಸವಣ್ಣನ ಚರಿತ್ರೆಯನ್ನು ನೋಡಬಯಸುವುದು ಪೂರ್ವಕಾಲದ ಭಕ್ತಿಯ ದೃಷ್ಟಿಯಿಂದಲ್ಲ, ಆಧುನಿಕ ಕಾಲದ ಐತಿಹಾಸಿಕ ದೃಷ್ಟಿಯಿಂದ. ಈ ದೃಷ್ಟಿಯಿಂದ ಬಸವಣ್ಣನ ಚರಿತ್ರೆಯನ್ನು ತಿಳಿದುಕೊಳ್ಳಲು ದೊರೆಯುವ

---

* ಮಲಬಸವರಾಜ ಚಾರಿತ್ರ ಅಥವಾ ಸಿಂಗಿರಾಜಪುರಾಣವನ್ನು ಬರೆದ ಸಿಂಗಿರಾಜನು ಬಸವಣ್ಣನ ಸಮಕಾಲಿಕನೆಂದೂ ಆತನ ಗ್ರಂಥವೇ ಅತ್ಯಂತ ಪ್ರಾಚೀನವೂ ವಿಶ್ವಾಸಾರ್ಹವೂ ಆದದ್ದೆಂದೂ ಮ||ರಾ|| ಹಾರ್ಡೇಕರ್ ಮಂಜಪ್ಪನವರು ಅಭಿಪ್ರಾಯಪಟ್ಟಿರುತ್ತಾರೆ (ಶ್ರೀ ಬಸವ ಚರಿತ್ರೆ). ಈ ಕವಿಯ ಕಾಲ ಸುಮಾರು ಕ್ರಿ. ಶ. ೧೫೦೦ ಎಂದು ಕರ್ಣಾಟಕ ಕವಿಚರಿತ್ರೆಯಲ್ಲಿ ಹೇಳಿದೆ. ಆದಕಾರಣ ಇದು ಇನ್ನೂ ಚರ್ಚಾಸ್ಪದವಾದ ವಿಷಯವಾಗಿ ಉಳಿದಿದೆ. ಸಿಂಗಿರಾಜನು ಅಷ್ಟು ಪ್ರಾಚೀನನಲ್ಲವೆಂದು ತೋರುತ್ತದೆ (ಕ. ಚ., III, lxxxi ನೋಡಿ).

ಮುಖ್ಯ ಸಾಧನಗಳು ಎರಡು—೧. ಬಸವಣ್ಣನ ಮತ್ತು ಆತನ ಸಮಕಾಲಿಕರ ವಚನಗಳು. ೨. ವೀರಶೈವ ಪುರಾಣಗಳು.* ಹಿಂದೆಯೇ ಹೇಳಿರುವಂತೆ ಪುರಾಣಗಳಲ್ಲಿ ನಿಜವಾದ ಸಂಗತಿಗಳೂ ಕಲ್ಪಿತವಾದುವೂ ಕಲಬೆರಕೆಯಾಗಿ ಹೋಗಿರುವುದರಿಂದ ಅವು ಸಂಪೂರ್ಣ ವಿಶ್ವಾಸಕ್ಕೆ ಅರ್ಹವಾದುವಲ್ಲ. ಆದರೂ ಅವನ್ನು ಪೂರ್ತಿಯಾಗಿ ನಿರಾಕರಿಸುವಂತಿಲ್ಲ. ಏಕೆಂದರೆ, ಅವನ್ನು ಶುದ್ಧಾಂಗವಾಗಿ ಕೈಬಿಟ್ಟರೆ ಬಸವಣ್ಣನ ಚರಿತ್ರೆಯನ್ನು ತಿಳಿದುಕೊಳ್ಳಲು ತಕ್ಕಷ್ಟು ಸಾಧನಗಳೇ ಇಲ್ಲದಂತಾಗುತ್ತದೆ. ಇನ್ನು ವಚನಗಳ ವಿಚಾರ. ಬಸವಣ್ಣನ ಮತ್ತು ಆತನ ಸಮಕಾಲಿಕರ ವಚನಗಳಲ್ಲಿ ಬಸವಣ್ಣನಿಗೆ ಸಂಬಂಧಿಸಿದ ಸಂಗತಿಗಳ ಪ್ರಸ್ತಾಪ ಅಲ್ಲಲ್ಲಿ ಬರುತ್ತದೆ. ಅವುಗಳಿಂದ ತಿಳಿದುಬರುವ ಸಂಗತಿಗಳು ವಿಶ್ವಾಸಾರ್ಹವಾದುವೆಂಬುದರಲ್ಲಿ ಸಂಶಯವಿಲ್ಲ. ಏಕೆಂದರೆ, ಅಲ್ಲಿ ಹೇಳಿರುವುದು ಪುರಾಣಕಾರರ ಮಾತಿನಂತೆ ತಾವು ಇನ್ನೊಬ್ಬರಿಂದ ಕೇಳಿ ಹೇಳುವ ಮಾತಲ್ಲ, ಆ ವಚನಕಾರರು ತಾವು ಸ್ವತಃ ಕಂಡುಂಡ ಮಾತು. ಅದೂ ಅಲ್ಲದೆ, ಕಥೆ ಜನರ ಬಾಯಲ್ಲಿ ಬದಲಾಯಿಸುತ್ತಾ ಹೋಗುವಂತೆ ವಚನಗಳು ಕಾಲಕ್ರಮದಲ್ಲಿ ಬದಲಾಯಿಸುವ ಸಂಭವ ಕಡಮೆ. ಹೀಗೆ ವಚನಗಳು ವಿಶ್ವಾಸಾರ್ಹವಾದುವಾದರೂ ಅವುಗಳಿಂದ ತಿಳಿದುಬರುವ ಬಸವಣ್ಣನ ಜೀವನದ ಬಾಹ್ಯಸಂಗತಿಗಳು ಬಹು ಸ್ವಲ್ಪ. ಅಷ್ಟೇ ಅಲ್ಲ. ಈ ವಚನಗಳು ಬಿಡಿಮಾತುಗಳಾದ್ದರಿಂದ ಅವು ಯಾವ ಸಂದರ್ಭಕ್ಕೆ ಸಂಬಂಧಿಸಿದುವೆಂಬುದನ್ನು ನಿರ್ಧರಿಸುವುದು ಸುಲಭವಲ್ಲ. ಆದಕಾರಣ ಈಗಿನ ಕಾಲದವರು ವಚನಗಳಿಂದ ತಿಳಿದುಬರುವ ಸಂಗತಿಗಳನ್ನೂ ಪುರಾಣಗಳಲ್ಲಿ ಹೇಳಿರುವ ಸಂಗತಿಗಳನ್ನೂ ಸಮನ್ವಯಮಾಡಿಕೊಂಡು ಬಸವಣ್ಣನ ಜೀವನ ಚರಿತ್ರೆಯನ್ನು ನಿರ್ಮಿಸಿಕೊಳ್ಳಬೇಕಾಗಿದೆ. ವಚನಗಳಲ್ಲಿ ಇಲ್ಲದಿರುವ ಸಂಗತಿಗಳ ವಿಚಾರದಲ್ಲಿ ಪುರಾಣಗಳಲ್ಲಿ ಹೇಳಿರುವುದನ್ನೇ ಪ್ರಮಾಣವಾಗಿ ಸ್ವೀಕರಿಸಬೇಕಾಗುತ್ತದೆ. ಜನರ ಬಾಯಲ್ಲಿ ಕಥೆ ಬೆಳೆಯುವಾಗ ಕಾಲ ಕಳೆದಂತೆಲ್ಲ ಹೆಚ್ಚು ಹೆಚ್ಚು ವ್ಯತ್ಯಾಸಗಳಾಗುವ ಸಂಭವವಿರುವುದರಿಂದ ಈ ಪುರಾಣಗಳಲ್ಲಿ ವ್ಯತ್ಯಾಸ ಕಂಡುಬಂದಾಗ ಈಚಿನ ಪುರಾಣಗಳಿಗಿಂತಲೂ ಹಿಂದಿನ ಪುರಾಣಗಳಿಗೆ ಹೆಚ್ಚು

* ಜೈನಕವಿಗಳು ಬರೆದಿರುವ ಬಿಜ್ಜಳ ಚರಿತ್ರೆಯಲ್ಲಿ ಪ್ರಾಸಂಗಿಕವಾಗಿ ಬಂದಿರುವ ಬಸವಣ್ಣನ ಚರಿತ್ರೆಗೆ ಆಧುನಿಕ ಚರಿತ್ರಕಾರರಲ್ಲಿ ಕೆಲವರು ಹೆಚ್ಚು ಬೆಲೆಯನ್ನು ಕೊಟ್ಟಿರುತ್ತಾರೆ. ಈ ಕವಿಗಳು ಗ್ರಂಥರಚನೆ ಮಾಡಿದ್ದು ಬಸವಣ್ಣನು ಕಾಲವಾದ ಅನೇಕ ಶತಮಾನಗಳ ಮೇಲೆ; ಅಲ್ಲದೆ, ಅವರ ಕಥೆಗಳಿಗೆ ಆಧಾರವೇನೆಂಬುದೂ ಗೊತ್ತಾಗುವುದಿಲ್ಲ. ಆದಕಾರಣ ಇವನ್ನು ಪ್ರಮಾಣವಾಗಿ ಗ್ರಹಿಸುವುದು ಸಂಗತವಲ್ಲವೆಂದು ತೋರುತ್ತದೆ.

ಪ್ರಾಶಸ್ತ್ಯವನ್ನು ಕೊಡುವುದು ನ್ಯಾಯಸಮ್ಮತವಾಗುತ್ತದೆ. ಒಂದು ಪುರಾಣವು ಎಷ್ಟು ಹಿಂದಿನದೋ ಅಷ್ಟು ಹೆಚ್ಚು ವಿಶ್ವಾಸಾರ್ಹವಾದುದು ಎಂದು ಸ್ಥೂಲವಾಗಿ ಇಟ್ಟುಕೊಳ್ಳಬಹುದು. ಈ ದೃಷ್ಟಿಯಿಂದ ಹರಿಹರನ 'ಬಸವರಾಜದೇವರ ರಗಳೆ'ಯೂ ಪಾಲ್ಕುರಿಕೆ ಸೋಮನಾಥನ ತೆಲುಗು 'ಬಸವ ಪುರಾಣ'ವೂ ಹೆಚ್ಚು ಆದರಣೀಯವಾಗುತ್ತವೆ.' ಏಕೆಂದರೆ, ಈಗ ತಿಳಿದಿರುವ ಮಟ್ಟಿಗೆ ಬಸವಣ್ಣನ ಚರಿತ್ರೆಯನ್ನು ಕುರಿತ ವೀರಶೈವ ಪುರಾಣಗಳಲ್ಲಿ ಇವೇ ಅತ್ಯಂತ ಪ್ರಾಚೀನವಾದುವು.

ಹರಿಹರನು ಸೋಮನಾಥನಿಗಿಂತಲೂ ಒಂದೆರಡು ತಲೆಮೊರೆ ಹಿಂದಿನವನಾದುದರಿಂದ[1] ಬಸವರಾಜದೇವರ ರಗಳೆ ತೆಲುಗು ಬಸವಪುರಾಣಕ್ಕಿಂತಲೂ ಹೆಚ್ಚು ಪ್ರಾಚೀನವಾದುದು. ಅಷ್ಟೇ ಅಲ್ಲ. ಬಸವಣ್ಣನವರ ಜೀವನದ ಕಾರ್ಯರಂಗಕ್ಕೆ ಹಂಪೆಯವನಾದ ಹರಿಹರನು ಗೋದಾವರಿ ಜಿಲ್ಲೆಯ ಪಾಲ್ಕುರಿಕೆಯ ಸೋಮನಾಥನಿಗಿಂತಲೂ ಹತ್ತಿರದವನು. ಆದಕಾರಣ ಹರಿಹರನು ಕೇಳಿದ ಮತ್ತು ಬರೆದಿಟ್ಟಿರುವ ಕಥೆಯೇ ಸೋಮನಾಥನದಕ್ಕಿಂತಲೂ ಹೆಚ್ಚು ವಿಶ್ವಾಸಾರ್ಹವಾಗಬೇಕಾದುದು ನ್ಯಾಯವಾಗಿದೆ. ಹೀಗಿದ್ದರೂ ಸೋಮನಾಥನ ತೆಲುಗು ಪುರಾಣಕ್ಕೆ ದೊರೆತ ಪುರಸ್ಕಾರ ಆ ಕಾಲದ ವೀರಶೈವರಿಂದ ಹರಿಹರನ ಕನ್ನಡದ ರಗಳೆಗೆ ದೊರೆಯಲಿಲ್ಲವೆಂದು ತೋರುತ್ತದೆ. ಭೀಮಕವಿ ಸೋಮನಾಥನ ಗ್ರಂಥವನ್ನನುಸರಿಸಿ ೧೪ನೆಯ ಶತಮಾನದಲ್ಲಿ ಬಸವಪುರಾಣವನ್ನು ಕನ್ನಡದಲ್ಲಿ ರಚಿಸಿದನು. ಆಮೇಲೆ ಆ ಗ್ರಂಥವೇ ಜನಪ್ರಿಯವಾಗಿ ಪರಿಣಮಿಸಿ ಅದಕ್ಕಿಂತ ಎಷ್ಟೋ ಹಿಂದೆ ಹುಟ್ಟಿದ್ದ ಬಸವರಾಜದೇವರ ರಗಳೆಯನ್ನು ಕೇಳುವವರಿಲ್ಲದಂತಾಯಿತು. ವೀರಶೈವ ಕವಿಗಳಲ್ಲಿ ಆದಿಕವಿಯೆಂದೂ ಅಗ್ರಗಣ್ಯನೆಂದೂ ಗೌರವ ಪಡೆದಿರುವ ಹರಿಹರನೇ ಅದನ್ನು ರಚಿಸಿದ್ದರೂ ಆ ಪುರಾಣದ ಮುಂದೆ ಈ ರಗಳೆ ನಿಲ್ಲಲಾರದೆ ಹೋಯಿತು. ಬಸವಣ್ಣನ ಚರಿತ್ರೆ ಪುರಾಣದಲ್ಲಿ ನಿರೂಪಿತವಾಗಿರುವಷ್ಟು ಉದಾತ್ತವಾಗಿ ರಗಳೆಯಲ್ಲಿ ನಿರೂಪಿತವಾಗಿಲ್ಲವೆಂಬ ಭಾವನೆಯೇ ಈ ಅನಾದರಕ್ಕೆ ಮುಖ್ಯಕಾರಣವೆಂದು ತೋರುತ್ತದೆ. ರಗಳೆಯಲ್ಲಿ ಬಸವಣ್ಣ

---

[1] ಹರಿಹರನ ಕಾಲ ಸುಮಾರು ಕ್ರಿ. ಶ. ೧೧೬೦ ಎಂದೂ ಸೋಮನಾಥನದು ೧೧೯೫ ಎಂದೂ ಕವಿಚರಿತೆಯಲ್ಲಿ ಹೇಳಿದೆ. ಇವರಿಬ್ಬರೂ ೧೩ನೆಯ ಶತಮಾನದವರೆಂದೂ ಹರಿಹರನು ಆ ಶತಮಾನದ ಪೂರ್ವಾರ್ಧದಲ್ಲಿಯೂ ಸೋಮನಾಥನು ಉತ್ತರಾರ್ಧದಲ್ಲಿಯೂ ಇದ್ದರೆಂದು ಹೇಳುವುದಕ್ಕೆ ಅವಕಾಶವಿದೆ. ಅದೇನೇ ಆಗಲಿ, ಹೇಗೂ ಹರಿಹರನು ಸೋಮನಾಥನಿಗಿಂತ ಒಂದೆರಡು ತಲೆಮೊರೆ ಹಿಂದಿನವನಾಗುತ್ತಾನೆ.

ನೊಬ್ಬನ ಕಥೆ ಮಾತ್ರ ಇದೆ—ಹರಿಹರನು ತನ್ನ ಯಾವ ರಗಳೆಯ ಗ್ರಂಥದಲ್ಲಾಗಲಿ ಕಥಾನಾಯಕನ ಚರಿತ್ರೆಯನ್ನು ಬಿಟ್ಟು ಆಕಡೆ ಈಕಡೆ ಸುಳಿಯುವುದಿಲ್ಲ. ಪುರಾಣ ದಲ್ಲಾದರೋ ಬಸವಣ್ಣನ ಕಥೆಯ ಜತೆಗೆ ಅನೇಕ ಶಿವಭಕ್ತರ ಕಥೆಗಳು ಸೇರಿ ಅದೊಂದು ಮಹಾಪುರಾಣವಾಗಿ ಪರಿಣಮಿಸಿದೆ. ಬಸವಪುರಾಣಕ್ಕೆ ದೊರೆತ ಪ್ರಾಶಸ್ತ್ಯಕ್ಕೆ ಇದೂ ಒಂದು ಕಾರಣವಾಗಿರಬಹುದು. ಅದು ಏನೇ ಆಗಲಿ, ಬಸವಪುರಾಣ ಹುಟ್ಟಿದ ಮೇಲೆ ಹರಿಹರನ ಈ ರಗಳೆಯ ಗ್ರಂಥಕ್ಕೆ ಪುರಸ್ಕಾರ ಉಳಿಯಲಿಲ್ಲ. ಮಿಕ್ಕವರ ಮಾತು ಹೋಗಲಿ, ಬಸವಣ್ಣನ ಚರಿತ್ರೆಯನ್ನು ಬರೆದ ಭೀಮಕವಿ, ಷಡಕ್ಷರಿ ಮೊದಲಾದವರು ಕೂಡ ಹರಿಹರನು ಬಸವರಾಜದೇವರ ರಗಳೆಯನ್ನು ಬರೆದನೆಂಬುದನ್ನು ತಮ್ಮ ಗ್ರಂಥಗಳಲ್ಲಿ ಸ್ಮರಿಸಲಿಲ್ಲ.[1] ಹೀಗಾಗಿ ಹರಿಹರನು ಈ ರಗಳೆಯನ್ನು ಬರೆದನೆಂಬುದನ್ನೇ ಜನರು ಕಾಲಕ್ರಮದಲ್ಲಿ ಮರೆತು ಬಿಟ್ಟರು. ಪರಿಸ್ಥಿತಿ ಎಲ್ಲಿಗೆ ಇಳಿದಿರುವುದೆಂದರೆ ಈ ರಗಳೆಯನ್ನು ಹರಿಹರನೇ ಬರೆದನೆಂದರೆ ಈಗ ನಂಬುವುದು ಕೂಡ ಕಷ್ಟವಾಗಿ ಹೋಗಿದೆ.

## ಬಸವರಾಜದೇವರ ರಗಳೆಯ ಕರ್ತೃ: ಹರಿಹರ

ಹೀಗೆ ಬಸವರಾಜದೇವರ ರಗಳೆ ತನಗೆ ನ್ಯಾಯವಾಗಿ ಸಲ್ಲಬೇಕಾದ ಆದರ ಗೌರವಗಳಿಂದ ವಂಚಿತವಾಗಿದ್ದರೂ ಜನಸಾಮಾನ್ಯದ ಕಣ್ಮನಗಳಿಂದ ದೂರ ವಾಗಿ ಹೋಗಿದ್ದರೂ ಕೆಲಕೆಲವರಾದರೂ ಇದನ್ನು ಓದುತ್ತಿದ್ದರೆಂಬುದರಲ್ಲಿಯೂ ಅವರಲ್ಲಿ ಕೆಲವರಾದರೂ ಅದರ ಮಹತ್ವವನ್ನು ಮನಗಂಡಿದ್ದರೆಂಬುದರಲ್ಲಿಯೂ ಸಂಶಯವಿಲ್ಲ.

(೧) ಅಂಥವರಲ್ಲಿ ಒಬ್ಬನಾದ ಸಿದ್ಧನಂಜೇಶನು ತನ್ನ "ರಾಘವಾಂಕ ಚಾರಿತ್ರ" ಎಂಬ ಗ್ರಂಥದಲ್ಲಿ, ರಾಘವಾಂಕನು ಹರಿಹರನ ಮಹತ್ವವನ್ನು ಕುಮಾರ ವ್ಯಾಸನಿಗೆ ವಿವರಿಸುವ ಸಂದರ್ಭದಲ್ಲಿ, ಹೀಗೆ ಹೇಳಿದಂತೆ ನಿರೂಪಿಸಿದ್ದಾನೆ—

---

[1] ಶಿವಶರಣರ ಚರಿತ್ರೆಗಳನ್ನು ಈಚೆಗೆ ಬರೆದವರು ಆ ಶರಣರ ಚರಿತ್ರೆಯನ್ನು ಹರಿಹರನು ಬರೆದಿದ್ದ ಪಕ್ಷದಲ್ಲಿ ಅದನ್ನು ತಮ್ಮ ಗ್ರಂಥಗಳಲ್ಲಿ ಸೂಚಿಸುವ ಪದ್ಧತಿಯುಂಟು. ಉದಾ ಹರಣೆಗೆ, ಹರಿಹರನು ರೇವಣಸಿದ್ಧೇಶ್ವರ ರಗಳೆಯನ್ನು ಬರೆದನೆಂದು ಚತುರ್ಮುಖ ಬೊಮ್ಮರಸನು ರೇವಣಸಿದ್ಧೇಶ್ವರ ಪುರಾಣ (ಸಂ. ೧—ಪ. ೨೧)ದಲ್ಲಿಯೂ ಮಹಾದೇವಿಯಕ್ಕನ ರಗಳೆಯನ್ನು ಬರೆದಿರುವನೆಂದು ಚೆನ್ನಬಸವಾಂಕನು ಮಹಾದೇವಿಯಕ್ಕನ ಪುರಾಣ (ಆ. ೧—ಪ. ೧೯) ದಲ್ಲಿಯೂ ಹೇಳಿದ್ದಾರೆ.

ಮತ್ತೆ ಕೇಳಿಲೆ ಕುಮಾರವ್ಯಾಸ **ಬಸವನಿ**
**ಪ್ಪತ್ತೈದು ಸ್ಥಲದ ರಗಳೆಯು ಮಾಡಿ** ಸಲಿವೃತ್ತ್ಯು
ದಾತ್ತಭಕ್ತಿಯೊಳಾ ವಿರೂಪಾಕ್ಷನೆಡೆಗೊಯ್ಯಲಿನಿದು ಮಿಗಿಲಾದುದೆಂದು|
ಹೊತ್ತಗೆಯ ತೆಗೆದುಕೊಂಡುಱೆ ಸುಂಗಿದಂ ಚೆನ್ನೆ
ಯಿತ್ತ ಪಾಲ್ಗುಡಿದಂತೆ ಸರ್ವರುಂ ಪೊಗಳಿದರು
ಚಿತ್ತಜಮದಾರಣ್ಯದಾವ ಹರಿಹರದೇವ ಕವಿಚಕ್ರವರ್ತಿಯೆಂದು ||

ಈ ಪದ್ಯದಲ್ಲಿ ಪ್ರಶಸ್ತಪಡಿಸಿರುವ ಭಾಗದಿಂದ ಹರಿಹರನು ಬಸವಣ್ಣನವರ ಚರಿತ್ರೆಯನ್ನು ಒಂದು ದೊಡ್ಡ ರಗಳೆಯ ಗ್ರಂಥವಾಗಿ* ರಚಿಸಿದ್ದಾನೆಂಬುದು ಸ್ಪಷ್ಟವಾಗುವುದೂ ಅಲ್ಲದೆ ಸಿದ್ಧನಂಜೇಶನ ದೃಷ್ಟಿಯಿಂದ ಆ ಗ್ರಂಥದ ಮಹತ್ವ ವೇನೆಂಬುದೂ ಈ ಪದ್ಯದಿಂದ ಸೂಚಿತವಾಗುತ್ತದೆ.

(೨) ಉತ್ತರದೇಶದ ಬಸವಲಿಂಗದೇವನು 'ಬಸವೇಶ್ವರ ಪುರಾಣದ ಕಥಾ ಸಾಗರ'[1] ಎಂಬ ಗ್ರಂಥವನ್ನು ಬರೆದಿದ್ದಾನೆ. ಅದರಲ್ಲಿ ಕಿನ್ನರಬೊಮ್ಮಯ್ಯನಿಗೆ ಸಂಬಂಧಿಸಿದ ಉಳ್ಳಿಯ ಕಥೆ ಬರುತ್ತದೆ. ಈ ಕಥೆ ನಮಗೆ ತಿಳಿದಿರುವ ಮಟ್ಟಿಗೆ ಕಂಡುಬರುವುದು ಬಸವರಾಜದೇವರ ರಗಳೆಯಲ್ಲಿ ಮಾತ್ರ. ಅಲ್ಲದೆ ಈ ರಗಳೆಯಲ್ಲಿ ಬರುವ ಕೆಲವು ಭಾವಗಳೂ ಪದಗಳೂ ವಾಕ್ಯಖಂಡಗಳೂ[2] ಬಸವಲಿಂಗದೇವನ

---

* ಸಿದ್ಧನಂಜೇಶನ ಹೇಳಿಕೆಯ ಪ್ರಕಾರ ಬಸವರಾಜದೇವರ ರಗಳೆಯಲ್ಲಿ ಇಪ್ಪತ್ತೈದು ಸ್ಥಳಗಳಿರಬೇಕು. ಈಗ ನಮಗೆ ದೊರೆತಿರುವುವು ಹದಿಮೂರು ಸ್ಥಳಗಳು ಮಾತ್ರ. ಹನ್ನೆರಡು ಸ್ಥಳಗಳಲ್ಲಿ ಅರ್ಧ ಕಥೆ ಮಾತ್ರ ಇದೆ. ಹದಿಮೂರನೆಯ ಸ್ಥಳವು ಮಿಕ್ಕ ಸ್ಥಳಗಳಂತಿರದೆ ಅದರಲ್ಲಿ ಕಥೆಯನ್ನು ಓಡಿಸಿಕೊಂಡು ಹೋದಂತಿದೆ. ಅಲ್ಲದೆ ಈ ಸ್ಥಳವು ಕೆಲವು ಹಸ್ತ ಪ್ರತಿಗಳಲ್ಲಿದೆ, ಕೆಲವುಗಳಲ್ಲಿಲ್ಲ. ಆದಕಾರಣ ಈ ಭಾಗವು ಪ್ರಕ್ಷಿಪ್ತವಾದುದೋ ಏನೋ ಎಂಬ ಸಂಶಯಕ್ಕೆ ಅವಕಾಶವಿದೆ.

1 ಈತನ ಕಾಲವು ಸು. ೧೬೦೦ ಎಂದು ಕವಿಚರಿತೆಯಲ್ಲಿ ಹೇಳಿದೆ (ಸಂ. III, ಪು. ೩೨೧) ಈ ಸಂಕಲನದಲ್ಲಿರುವ ಕಥೆಗಳನ್ನು ಹಿಂದಿನ ಪ್ರಮಾಣ ಗ್ರಂಥಗಳಿಂದ ಆರಿಸಿಕೊಂಡಿರುವುದಾಗಿ ಗ್ರಂಥದ ಕೊನೆಯಲ್ಲಿ ಹೀಗೆ ಹೇಳಿದ್ದಾನೆ. ''ಶ್ರೀ ಈ ಕಥೆಗಳು ಹದಿನೆಂಟು ಪುರಾಣ, ಭಾರತ ರಾಮಾಯಣದ ಕಥೆಗಳು, ಮತ್ತೆ ವೀರಶೈವಾಮೃತ ಪುರಾಣ, ಆರಾಧ್ಯ ಚಾರಿತ್ರ, ಗಣಾಡಂಬರ, ಸಿಂಗಿರಾಜಯ್ಯನ ಕೃತಿ, ಶಿವತತ್ವಚಿಂತಾಮಣಿ, **ಹರೀಶ್ವರದೇವರು ಮಾಡಿದ ರಗಳೆ,** ಸಿದ್ಧರಾಮೇಶ್ವರ ಚಾರಿತ್ರ, ಶೂನ್ಯಸಂಪಾದನೆ, ಮೊದಲಾದವರಲ್ಲಿದ್ದ ಕಥೆಗಳನ್ನೆ ಸಂಗ್ರಹಿಸಿದೆ ವಲ್ಲದೆ ಕಲ್ಪನೆಯ ಕಥೆಗಳ ಹೇಳಲಿಲ್ಲ.''

2 ಉದಾಹರಣೆಗೆ: ಕಿನ್ನರಯ್ಯನ ಬರವನ್ನು ಬಸವಣ್ಣ 'ಚಂದ್ರೋದಯದ ಚಕೋರ ಬಯಸುವಂತೆ, ಮುಂಗಾರಹನಿಯ ಚಾತಕ ಬಯಸುವಂತೆ' ಬಯಸುತ್ತಿದ್ದನು. ಕಿನ್ನರಯ್ಯ

ಕಥೆಯಲ್ಲಿಯೂ ಕಂಡುಬರುವುದರಿಂದ ಈ ರಗಳೆಯ ಆಧಾರದ ಮೇಲೆಯೇ ಆತನು ತನ್ನ ಕಥೆಯನ್ನು ಬರೆದಿರುವನೆಂಬುದು ಸ್ಪಷ್ಟವಾಗುತ್ತದೆ. ಬಸವಲಿಂಗದೇವನು ತನ್ನ ಕಥೆಗಳಿಗೆ ಆಧಾರವೆಂದು ಹೇಳಿರುವ ಗ್ರಂಥಗಳಲ್ಲಿ ಹರಿಹರನದು ಹೊರತು ಮತ್ತಾವುದೂ ರಗಳೆಯ ಗ್ರಂಥವಲ್ಲವಾದ್ದರಿಂದ ಆತನು ತನ್ನ ಈ ಕಥೆಗೆ ಆಧಾರವಾಗಿ ಇಟ್ಟುಕೊಂಡಿರುವ ರಗಳೆಯ ಗ್ರಂಥ, ಎಂದರೆ ಬಸವರಾಜದೇವರ ರಗಳೆ, ಹರಿಹರನದೇ ಆಗಿರಬೇಕೆಂದು ಸಿದ್ಧವಾಗುತ್ತದೆ.

ಒಂದುವೇಳೆ ಮೇಲೆ ಹೇಳಿದ ಎರಡು ಆಧಾರಗಳು ದೊರೆಯದೆ ಹೋಗಿದ್ದರೂ ಹರಿಹರನ ಇತರ ರಗಳೆಗಳನ್ನು ಓದಿದ್ದವರು ಈ ರಗಳೆಯು ಹರಿಹರನದೇ ಎಂದು ನಿರ್ಧರಿಸಬಹುದಾಗಿತ್ತು. ಏಕೆಂದರೆ ಹರಿಹರನವೆಂದು ನಿರ್ದಿಷ್ಟವಾಗಿ ಗೊತ್ತಾಗಿರುವ ರಗಳೆಗಳಲ್ಲಿ[3] ಸಾಮಾನ್ಯವಾಗಿ ಕಂಡುಬರುವ ಕವಿತಾಸಾಮರ್ಥ್ಯ, ಅಂಕಿತ, ಕಥಾರಚನಾಕ್ರಮ—ಇವು ಮಾತ್ರವಲ್ಲದೆ ಕೆಲವು ವಿಶೇಷ ಭಾವಗಳೂ

---

ಮೇಲೋಗರಕ್ಕೆ ಉಳ್ಳಿಯ ಸುಲಿಯುತ್ತಿರಲು 'ಬಸವಣ್ಣನ ನಾಸಿಕಕ್ಕೆ ಕಂಪೆಸೆಯಲು' ವಾಸನಾದ್ರವ್ಯವನ್ನಿಲ್ಲಿಗೆ ತಂದವರಾರೆಂದನು. ಆಗ ಕಿನ್ನರಯ್ಯನು 'ಅಮೃತಮಯವಾದ ಉಳ್ಳಿಯ ನಿರಾಕರಿಸಿದರೆ' ಎಂತು ತಾಳುವೆನೆಂದು ಹೊರಟುಹೋದನು. ಶರಣರು ಬಸವನೊಡನೆ ನೀವು ಜರೆಯಲು ಕಿನ್ನರಯ್ಯ 'ಮುನಿದುಹೋದ'ನೆಂದು ಹೇಳಲು, ಆತನು 'ಆನೆಗೆ ರತ್ನಗಂಬಳಿ, ಕುದುರೆಯ ಹಲ್ಲಣ ಇವೆಲ್ಲವನ್ನು ಉಳ್ಳಿಯಲ್ಲಿ ಸಿಂಗರಿಸಿ, ಚಪ್ಪರವಿಕ್ಕಿ' ಕಿನ್ನರಯ್ಯನನ್ನು ಅರಮನೆಗೆ ಕರತಂದು 'ಮಲ್ಲಿಗೆಯ, ಚಂದ್ರನ, ನಕ್ಷತ್ರದ ಬಿಳುಪಿಗೆ ಸಮಾನವಾದ ಉಳ್ಳಿಯ' ಅಡಿಗೆಯನ್ನು ಮಾಡಿ ಬಡಿಸಿದನು (ಬಸವರಾಜದೇವರ ರಗಳೆಯಲ್ಲಿ ಬರುವ ನುಡಿಗಳೊಡನೆ ಹೋಲಿಸಿ ನೋಡಿ).

[3] ಅರುವತ್ತು ಮೂವರು ಪುರಾತನರ ಕಥೆಗಳನ್ನು ತಾನು ಬರೆದಿರುವುದಾಗಿ 'ಅರುವತ್ತು ಮೂವರ ಕಥಾ ಗರ್ಭ'ದಲ್ಲಿಯೂ ತಿರುನೀಲಕಂಠರ ರಗಳೆಯ ಆದಿಯಲ್ಲಿಯೂ ಹರಿಹರನೇ ಹೇಳಿಕೊಂಡಿದ್ದಾನೆ. ಇವನ್ನಲ್ಲದೆ ಮತ್ತಾವ ರಗಳೆಗಳನ್ನು ಬರೆದನೆಂಬುದನ್ನು ಆತನು ಎಲ್ಲಿಯೂ ಕಂಠೋಕ್ತವಾಗಿ ಹೇಳಿರುವಂತೆ ತಿಳಿದುಬಂದಿಲ್ಲ. ಆದರೆ ಮತ್ತೆ ಕೆಲವನ್ನು ಈತನು ಬರೆದನೆಂದು ನಿರ್ಧರಿಸುವುದಕ್ಕೆ ನಿಷ್ಕೃಷ್ಟವಾದ ಆಧಾರಗಳು ದೊರೆಯುತ್ತವೆ. ಉದಾಹರಣೆಗೆ ಹರಿಹರನು ರೇವಣಸಿದ್ಧೇಶ್ವರ ರಗಳೆಯನ್ನು ಬರೆದನೆಂದು ಚತುರ್ಮುಖ ಬೊಮ್ಮರಸನೂ, ಮಹಾದೇವಿಯಕ್ಕನ ರಗಳೆಯನ್ನು ಬರೆದನೆಂದು ಚೆನ್ನಬಸವಾಂಕನೂ ತಮ್ಮ ಗ್ರಂಥಗಳಲ್ಲಿ ಹೇಳಿರುತ್ತಾರೆ. ಮಹಿಮಾರಗಳೆ ಭೃಂಗೀರಗಳೆಗಳಲ್ಲಿ ಹರಿಹರನ ಹೆಸರೂ ಆತನ ಗುರುಪರಂಪರೆಯೂ ಇರುವುದರಿಂದ ಅವು ಆತನಿಂದಲೇ ರಚಿತವಾದುವೆಂಬುದು ಸಿದ್ಧವಾಗುತ್ತದೆ. ಹೀಗೆ ಹರಿಹರನವೇ ಎಂದು ನಿಷ್ಕೃಷ್ಟವಾಗಿ ನಿರ್ಧರಿಸಲಾಗದ, ಆದರೆ ಆತನವೇ ಎಂದು ತೋರುವ ಅನೇಕ ರಗಳೆಗಳಿವೆ. ಈತನು ಬರೆದ ರಗಳೆಗಳ ಸಂಖ್ಯೆ ಒಟ್ಟು ೧೦೧ ಎಂದು ಕೆಲವರೂ, ೧೨೦ ಎಂದು ಕೆಲವರೂ ಹೇಳುತ್ತಾರೆ (ಕವಿಚರಿತೆ, ಸಂ I, ಪು. ೨೩೨).

ಮಾತಿನ ಧೋರಣೆ ಮೊದಲಾದುವೂ ಈ ರಗಳೆಯಲ್ಲಿಯೂ ಕಂಡುಬರುತ್ತವೆ. ಇದಕ್ಕೆ ಕೆಲವು ನಿದರ್ಶನಗಳನ್ನು ಇಲ್ಲಿ ಕೊಟ್ಟಿದೆ.

೧. ಅಂಕಿತ, ರಚನಾಕ್ರಮ :

i. ಹರಿಹರನವೆಂದು ಗೊತ್ತಾಗಿರುವ ರಗಳೆಗಳಲ್ಲಿ ರಗಳೆಯ ಆರಂಭಕ್ಕೆ ಮೊದಲೂ ಅದು ಮುಗಿದ ಮೇಲೆಯೂ ಒಂದು ಕಂದ ಅಥವಾ ವೃತ್ತವಿರುತ್ತದೆ. ಅವುಗಳಲ್ಲಿ ಕಥಾನಾಯಕನ ಹೆಸರೂ ಪಂಪಾ ವಿರೂಪಾಕ್ಷನ ಅಂಕಿತವೂ ಇರುತ್ತವೆ.

ii. ಪ್ರತಿಯೊಂದು ರಗಳೆಯ ಕೊನೆಯ ಪಾದಗಳಲ್ಲಿಯೂ ಪಂಪಾವಿರೂಪಾಕ್ಷನ ಅಂಕಿತವಿರುತ್ತದೆ.

iii. ವಿಸ್ತಾರವಾದ ಕಥೆಯನ್ನೊಳಕೊಂಡ ರಗಳೆಗಳು ಕೆಲವು ಭಾಗಗಳಾಗಿ ವಿಭಾಗವಾಗಿರುತ್ತವೆ. ಆ ಭಾಗಗಳಿಗೆ ಸ್ಥಲಗಳೆಂದು ಹೆಸರು. ಈ ಸ್ಥಲಗಳಲ್ಲಿ ಮೊದಲನೆಯದು ರಗಳೆಯಲ್ಲಿಯೂ ಎರಡನೆಯದು ಗದ್ಯದಲ್ಲಿಯೂ ಹೀಗೆ ಸ್ಥಲಗಳು ಅನುಕ್ರಮವಾಗಿ ರಚಿತವಾಗಿರುತ್ತವೆ.

iv. ಅನೇಕ ಸ್ಥಲಗಳಿರುವ ರಗಳೆಗಳಲ್ಲಿ ಎರಡನೆಯ ಸ್ಥಲದಿಂದ ಪ್ರತಿಯೊಂದು ಸ್ಥಲದಲ್ಲಿಯೂ ಆ ಸ್ಥಲದ ಕಥೆಯ ಆರಂಭಕ್ಕೆ ಮೊದಲು ಒಂದು ಕಂದಪದ್ಯ ಅಥವಾ ವೃತ್ತವಿರುತ್ತದೆ (ಕೆಲವು ವೇಳೆ ಹೆಚ್ಚು ಪದ್ಯಗಳಿರುವುದೂ ಉಂಟು). ಅದರಲ್ಲಿ ಹಿಂದಿನ ಸ್ಥಲದಲ್ಲಿ ವರ್ಣಿತವಾದ ಕಥಾಭಾಗವು ಸಂಗ್ರಹವಾಗಿ ಸೂಚಿತವಾಗುತ್ತದೆ.

೨. ವಿಶೇಷ ಭಾವಗಳು, ಮಾತಿನ ಧೋರಣೆ ಇತ್ಯಾದಿ :

i. ಕೈಲಾಸದ ಪ್ರಮಥಗಣಗಳು ಭೂಲೋಕದಲ್ಲಿ ಶಿವಶರಣರಾಗಿ ಹುಟ್ಟಲು ಕಾರಣವು ಅವರು ಕೈಲಾಸದಲ್ಲಿ ಮಾಡಿದ ಯಾವುದೋ ಒಂದು ತಪ್ಪು ಎಂಬುದು ಹರಿಹರನ ಗ್ರಂಥಗಳಲ್ಲಿ ಕಂಡುಬರುವ ಒಂದು ಅಪೂರ್ವವಾದ ಭಾವನೆ. ಈ ವಿಧವಾದ ಭಾವನೆ ನಂಬಿಯಣ್ಣ,* ರೇವಣಸಿದ್ಧ, ಮಹಾದೇವಿಯಕ್ಕ ಇವರ ರಗಳೆಗಳಲ್ಲಿ ಕಂಡುಬರುತ್ತದೆ. ಒಂದು ದಿನ ಪುಷ್ಪದಂತನೆಂಬ ಪ್ರಮಥನು ಪಾರ್ವತಿಗಾಗಿ ಹೂವು ಕೊಯ್ಯುತ್ತಿದ್ದ ಇಬ್ಬರು ವಿಲಾಸಿನಿಯರನ್ನು ನೋಡಿ ಮೋಹಗೊಳ್ಳಲು, ನಂಬಿಯಣ್ಣನೆಂಬ ಹೆಸರಿನಿಂದ ಭೂಮಿಯಲ್ಲಿ ಹುಟ್ಟೆಂದು

---

* ನಂಬಿಯಣ್ಣನು ಅರುವತ್ತುಮೂವರು ಪುರಾತನರಲ್ಲಿ ಒಬ್ಬನು.

ಶಿವನು ಅವನಿಗೆ ಆಜ್ಞೆಮಾಡುತ್ತಾನೆ. ರೇಣುಕನೆಂಬ ಪ್ರಮಥನು ಒಂದು ದಿನ ಶಿವನ ಪ್ರಸಾದವನ್ನು ಸ್ವೀಕರಿಸುವುದಕ್ಕೆ ಹೋಗುತ್ತಾ ದಾರಿಯಲ್ಲಿ ದಾರುಕನೆಂಬ ಪ್ರಮಥನನ್ನು ದಾಟಿಕೊಂಡುಹೋಗಲು ಆ ತಪ್ಪಿಗಾಗಿ ಭೂಮಿಯಲ್ಲಿ ಮನುಷ್ಯನಾಗಿ ಹುಟ್ಟುವಂತೆ ಶಿವನು ಅವನಿಗೆ ಆಜ್ಞಾಪಿಸಿದನು. ಮಹಾದೇವಿ ಎಂಬ ರುದ್ರಕನ್ನಿಕೆಗೆ ಒಬ್ಬ ಗುಪ್ತ ಗಣೇಶ್ವರನ ಕಾಲು ಸೋಕಲು ಆಕೆ ಅವನನ್ನು ಹೀನಭವಿ ಎಂದು ಬೈದಳು. ಅದನ್ನು ನೋಡಿ ಪಾರ್ವತಿ ಅವಳನ್ನು ಕುರಿತು, ನೀನು ಮರ್ತ್ಯಲೋಕದಲ್ಲಿ ಭಕ್ತರ ಹೊಟ್ಟೆಯಲ್ಲಿ ಹುಟ್ಟಿ ಭವಿಗೆ ಹೆಂಡತಿಯಾಗಿ ಶಿವಭಕ್ತರ ಸೇವೆಮಾಡಿ ಮರಳಿ ಕೈಲಾಸಕ್ಕೆ ಬಾ ಎಂದು ಆಜ್ಞೆಮಾಡುತ್ತಾಳೆ. ಬಸವಣ್ಣನು ಮನುಷ್ಯನಾಗಿ ಹುಟ್ಟುವುದಕ್ಕೂ ಅಂಥದೇ ಒಂದು ಕಾರಣವು ಬಸವರಾಜದೇವರ ರಗಳೆಯಲ್ಲಿ ಉಕ್ತವಾಗಿದೆ. ಶಿವನ ಆಸ್ಥಾನದಲ್ಲಿ ವೃಷಭಮುಖನೆಂಬ ಗಣಪನು ಪ್ರಸಾದವನ್ನು ಹಂಚುವಾಗ ಷಣ್ಮುಖನಿಗೆ ಕೊಡುವುದನ್ನು ಮರೆತು ಕೊಟ್ಟೆನೆಂದು ಸುಳ್ಳು ಸಾಧಿಸಿದ್ದರಿಂದ ಶಿವನು ಆತನನ್ನು ಕುರಿತು, ಭೂಮಿಯಲ್ಲಿ ಬಸವನೆಂಬ ಹೆಸರಿನಿಂದ ಹುಟ್ಟಿ "ಇಲ್ಲಿ ಪ್ರಸಾದಮಂ ಕುಡದಿರ್ದ ಬಳಿವಿಡಿದು | ಅಲ್ಲಿ ಪ್ರಸಾದಮಂ ವಾದಿನಿಂದಂ ಪಡೆದು | ಗಣಸಮಕ್ಷದ ಪುಸಿಗೆ ಶರಣರ್ಗೆ ಮಾಡುತ್ತೆ | ಅಣಿಯರದೊಳೆನ್ನ ಭಕ್ತಿಯನಿಳೆಗೆ ಕೂಡುತ್ತೆ | ಎನ್ನ ಪ್ರಸಾದ ಸಾಮರ್ಥ್ಯಮಂ ತೋಱುತಂ | ಮನ್ನಣೆಯೊಳಿಲ್ಲಿಗೈತಪ್ಪುರ್ದಿದು ನಿರ್ಮಿತಂ" (೧: ೭೯-೮೪) ಎಂದು ಹೇಳುತ್ತಾನೆ. ಬಸವಣ್ಣನ ಜನನದ ವಿಚಾರದಲ್ಲಿ ಈ ತೆರನಾದ ಕಲ್ಪನೆ ನಮಗೆ ತಿಳಿದಿರುವ ಮಟ್ಟಿಗೆ ಮತ್ತಾವ ವೀರಶೈವ ಗ್ರಂಥದಲ್ಲಿಯೂ ಕಂಡುಬರುವುದಿಲ್ಲವಾದದ್ದರಿಂದಲೂ ಹರಿಹರನ ಇತರ ರಗಳೆಗಳಲ್ಲಿ ಇದೇ ತೆರದ ಕಲ್ಪನೆ ಕಂಡುಬರುವುದರಿಂದಲೂ ಈ ರಗಳೆ ಹರಿಹರಕೃತವಾಗಿರಬೇಕೆಂಬುದಕ್ಕೆ ಇದೂ ಒಂದು ಸಾಧನವಾಗಿರುತ್ತದೆ.

ii. ಇಹಪ್ಪಗೆಯಾಂಡರ ರಗಳೆ[1]ಯಲ್ಲಿ ಶಿವನು ಆತನನ್ನು ಪರೀಕ್ಷಿಸುವುದಕ್ಕಾಗಿ ಸುಖಿಜಂಗಮನ ವೇಷದಲ್ಲಿ ಬಂದಾಗ ಆತನು ತನ್ನ ಹೆಂಡತಿಯಾದ ಪತಿಹಿತವೆಯನ್ನು ಆ ಜಂಗಮನಲ್ಲಿಗೆ ಕಳುಹಿಸಲು ಶಿವನು ಮೆಚ್ಚಿ ಆಕೆಗೆ ಸ್ವಸ್ವರೂಪವನ್ನು ತೋರಿಸಿದನು. ಅದನ್ನು "ಪತಿಹಿತವೆ ಕಂಡಿಹಿಪ್ಪಗೆಯಾಂಡ ಬಾ ಬಾರ | ಅತಿಕರಂ ಲೇಸಾಯ್ತು ಬಾರೆಲೆಲೆ ಬಾ ಬಾರ |" ಎಂದು ಸಂಭ್ರಮದಿಂದ ಕೂಗಿ "ನೋಡ ದೇವರಿವರಿವರೆನ್ನಲು" ಆತನು ನಿಶ್ಚಿಂತನಾಗಿ "ಮರುಳೆ ಮುನ್ನಾರೆಂದು ಕೊಟ್ಟೆನೆಂ"ದುತ್ತರ ಕೊಡುತ್ತಾನೆ. ಬಸವರಾಜದೇವರ ರಗಳೆ

[1] ಈತನು ಅರುವತ್ತುಮೂವರು ಪುರಾತನರಲ್ಲಿ ಒಬ್ಬನು.

ಯಲ್ಲಿಯೂ (ಸ್ಥಲ ೧೨) ಶಿವನು ಬಸವಣ್ಣನವರ ಭಕ್ತಿಯನ್ನು ಪರೀಕ್ಷಿಸುವುದಕ್ಕಾಗಿ ಸುಖಿಜಂಗಮವೇಷದಿಂದ ಬರುತ್ತಾನೆ. ಬಸವಣ್ಣನವರು ತಮ್ಮ ಪ್ರೀತಿಯ ಪತ್ನಿಯಾದ ಮಾಯಿದೇವಿಯನ್ನು ಜಂಗಮನಿಗೆ ಒಪ್ಪಿಸುತ್ತಾರೆ. ಅದಕ್ಕೆ ಮೆಚ್ಚಿ ಶಿವನು ಮಾಯಿದೇವಿಗೆ ಸ್ವಸ್ವರೂಪ ತೋರಲು ಆಕೆ "ನೋಡಲಮ್ಮದೆ ನಡನಡಂ ನಡುಗಿ, ಬಸವ ಬಸವಾ, ಜಂಗಮದೇವರು ಸಂಗಮದೇವರಾದರೆನೆ," ಬಸವಣ್ಣನವರು "ತಾಯೆ ತಾಯೆ, ಮುನ್ನವಾರೆಂದು ಕೊಟ್ಟೆನೆಂ"ದುತ್ತರ ಕೊಡುತ್ತಾರೆ.

iii. ಭೋಗಣ್ಣನ ರಗಳೆ[2]ಯಲ್ಲಿ ಕೆಂಭಾವಿಯ ಬ್ರಾಹ್ಮಣರು ಆ ಊರಿನ ಅರಸನಾದ ಚಂದಿಮರಸನಲ್ಲಿಗೆ ಹೋಗಿ ಭೋಗಣ್ಣನು ಶಿವಶರಣನೆಂದು ಒಬ್ಬ ಹೊಲೆಯನನ್ನು ಮನೆಯಲ್ಲಿ ಸೇರಿಸಿಕೊಂಡಿರುವನೆಂಬುದಾಗಿ ದೂರಲು ಚಂದಿಮರಸನು ಕರಸಿ ಕೇಳಿದಾಗ ಭೋಗಣ್ಣನು,

. . . . ಹೊಲೆಯರಂ ಹೊಗಿಸಿತಿಲ್ಲ ಮನೆಯೊಳಗರಸ |
ನಿನಗೆ ತಿಳಿವಿಲ್ಲ ತಿಳಿವಿಲ್ಲದಡೆ ಕೇಳರಸ |
ನಾರಣಕ್ರಮಿತರಂ ಹೊಗಿಸಿದೆನೆ ಮನೆಯೊಳಗೆ |
ಸೂರಿಭಟ್ಟರನೊಯ್ದು ಪುಗಿಸಿದೆನೆ ಮನೆಯೊಳಗೆ |
ಕೃಷ್ಣಪೆದ್ದಿಗಳನೊಮ್ಮೆಯುಂ ಕರೆದು ಬಲ್ಲೆನೇ |
ವಿಷ್ಣುಭಟ್ಟರನೊಮ್ಮೆಯುಂ ಸೋಂಕಿ ಬಲ್ಲೆನೇ |
ಶಿವನನಱಿಯದ ಹೊಲೆಯರಂ ಹೊಗಿಸೆ ಕೇಳರಸ |
ಶಿವಭಕ್ತನಂ ಹೊಗಿಸಿದೆಂ ತಪ್ಪೆ ಹೇಳರಸ |

ಎಂದು ಉತ್ತರ ಕೊಡುತ್ತಾನೆ. ಬಸವರಾಜದೇವರ ರಗಳೆಯಲ್ಲಿಯೂ ಇಂಥ ಒಂದು ಸನ್ನಿವೇಶವಿದೆ. ಮಂಗಳವಾಡದ ಬ್ರಾಹ್ಮಣರು ಬಿಜ್ಜಳನಲ್ಲಿಗೆ ಹೋಗಿ, ಬಸವಣ್ಣನು ನಾಗಿದೇವನೆಂಬ "ಪೊಲೆಯನೆಂದಡೆ ಕೋಪಂ—ಹಿರಿಯಭಕ್ತನ"

[1] ಈ ಭೋಗಣ್ಣನ ರಗಳೆಯನ್ನು ಹರಿಹರನು ಬರೆದನೆಂಬುದಕ್ಕೆ ಅದರ ಅಂಕಿತ ರಚನಾಕ್ರಮಗಳ ಆಧಾರವಲ್ಲದೆ ಪಂಪಾಶತಕದಲ್ಲಿಯೂ ಆಧಾರವು ದೊರೆಯುತ್ತದೆ. ಆ ಶತಕದಲ್ಲಿ ಶಿವಶರಣರ ಮಹಿಮೆಯನ್ನು ಕೊಂಡಾಡುವಾಗ ಪುರಾತನರಲ್ಲಿ ಕೆಲವರ ಹೆಸರಿನ ಜತೆಗೆ ಜೊಮ್ಮಯ್ಯ, ಭೋಗಯ್ಯ, ದಾಸಿಮಯ್ಯ, ಕೊಡಗೂಸು ಇವರ ಹೆಸರುಗಳು ಉಕ್ತವಾಗಿವೆ (ಪ. ೫೯, ೬೬, ೬೭). ಅಲ್ಲಿ ಸೂಚಿತವಾಗಿರುವ ಅವರ ಮಹಿಮೆಯನ್ನು ನೋಡಿದರೆ ಅವರು ತೆಲುಗು ಜೊಮ್ಮಯ್ಯ, ಕೆಂಭಾವಿಯ ಭೋಗಣ್ಣ, ಜೇಡರ ದಾಸಿಮಯ್ಯ, ಕೋಳೂರು ಕೊಡಗೂಸು ಎಂದು ಗೊತ್ತಾಗುತ್ತದೆ. ಪುರಾತನರ ರಗಳೆಗಳನ್ನು ಬರೆದಂತೆಯೇ ಈ ಶಿವಶರಣರ ರಗಳೆಗಳನ್ನೂ ಹರಿಹರನು ಬರೆದಿರಬೇಕೆಂಬುದರಲ್ಲಿ ಸಂಶಯವಿಲ್ಲ.

ಮನೆಯಲ್ಲಿ ಊಟಮಾಡಿದನೆಂದು ದೂರುತ್ತಾರೆ. ಆಗ ಬಿಜ್ಜಳನು ಕರಸಿ ಕೇಳಲು ಬಸವಣ್ಣನವರು ಕೊಟ್ಟ ಈ ಉತ್ತರವನ್ನು ಭೋಗಣ್ಣನು ಚಂದಿಮರಸನಿಗೆ ಕೊಟ್ಟ ಉತ್ತರದೊಡನೆ ಹೋಲಿಸಬಹುದು—

"ಎಲೆ ಬುದ್ಧಿಯಿಲ್ಲದ ಭೂಪ, ಎರಗಿವಿಯ ಮರುಳೆ, ನಾರಣಕ್ರಮಿತರ ಕೇರಿಯಿಂ ಪೊಕ್ಕೆನೆ? ಮುಕುಂದ ಭಟ್ಟರ ಮನೆಯೊಳುಂಡೆನೆ? ಸೌರಿಪೆದ್ದಿಗಳ ಸಾರಿ ನಿಂದೆನೆ? ದಾಮೋದರ ಭಟ್ಟರಂ ಪ್ರೇಮದಿಂ ಸೋಂಕಿದೆನೆ? ಕೇಶವ ಫೈಸರ ವಾಸನೆಯುಂಟೆ? ಹರನನಱಿಯದ ಹೊಲೆಯರ ಮನೆಯಂ ಹೊಕ್ಕುಂಡುದಿಲ್ಲ" (೧೦ : ೪೨–೪೭).

'ಗಿರಿಜಾ ಕಲ್ಯಾಣ'ದಲ್ಲಿ ಪಾರ್ವತಿಯನ್ನೂ 'ಮಹಾದೇವಿಯಕ್ಕನ ರಗಳೆ' ಯಲ್ಲಿ ಆಕೆಯನ್ನೂ "ಹೊಂಗಡಗದ ಲಿಂಗವಂತೆ" ಎಂದು ವಿಶೇಷಿಸಿದೆ. ಬಸವ ರಾಜದೇವರ ರಗಳೆಯಲ್ಲಿಯೂ ಬಸವಣ್ಣನ ಮಗನ ಬಾಲ್ಯವರ್ಣನೆಯಲ್ಲಿ ಆತನನ್ನು "ಹೊಂಗಡಗದ ಲಿಂಗವಂತಂ" ಎಂದು ವಿಶೇಷಿಸಿದೆ. ಗಿರಿಜಾ ಕಲ್ಯಾಣದಲ್ಲಿ ಪಾರ್ವತಿ ಹುಟ್ಟಿದಮೇಲೆ ಲಿಂಗವನ್ನು ತೋರಿಸಲು ಕಣ್ದೆರೆದಳೆಂದು ಹೇಳಿದೆ; ಬಸವಣ್ಣನು "ಲಿಂಗಮಂ ತೋಱೆ ಕಣ್ದೆಱೆದು ಸುಖಿ"ಯಾದನೆಂದು ಬಸವರಾಜ ದೇವರ ರಗಳೆಯಲ್ಲಿ ಹೇಳಿದೆ.

ಬಸವದೇವರಾಜ ರಗಳೆಯ ಈ ಅಂತರಪ್ರಮಾಣಗಳೂ, ಸಿದ್ಧನಂಜೇಶ ಉತ್ತರದೇಶದ ಬಸವಲಿಂಗದೇವ ಇವರ ಗ್ರಂಥಗಳಲ್ಲಿ ದೊರೆಯುವ ಪ್ರಮಾಣಗಳೂ ಎಂತಹ ಸಂಶಯಗ್ರಸ್ತರಿಗಾದರೂ ಬಸವರಾಜದೇವರ ರಗಳೆ ಹರಿಹರಕೃತವಾದು ದೆಂಬ ನಂಬುಗೆಯನ್ನುಂಟುಮಾಡದಿರಲಾರವು.

## ಬಸವರಾಜದೇವರ ರಗಳೆಯ ಕಥಾಸಾರಾಂಶ

ಇತರ ಪುರಾಣಲೇಖಕರಂತೆ ಹರಿಹರನು ಕೂಡ ತಾನು ಕೇಳಿದ ಕಥೆಯ ಆಧಾರದಮೇಲೆಯೇ ಕಾವ್ಯರಚನೆ ಮಾಡಿರುವನೆಂದು ಹಿಂದೆ ಹೇಳಿರುವೆವಷ್ಟೆ. ಇದರಲ್ಲಿ ನಿರೂಪಿತವಾದ ಕಥೆಯ ಸಾರಾಂಶವನ್ನು ಇಲ್ಲಿ ಮೊದಲು ಕೊಟ್ಟು ಅನಂತರ ಈ ಕಥೆಗೂ, ಮಿಕ್ಕ ಪುರಾಣಗಳ, ಮುಖ್ಯವಾಗಿ ಬಸವಪುರಾಣದ, ಕಥೆಗೂ ಇರುವ ಕೆಲವು ಪ್ರಮುಖ ವ್ಯತ್ಯಾಸಗಳನ್ನು ತಿಳಿಸುತ್ತೇವೆ.

ಕೈಲಾಸದಲ್ಲಿ ಶಿವನು ಒಂದು ದಿನ ಒಡ್ಡೋಲಗದಲ್ಲಿರುವಾಗ ಒಬ್ಬ ಮಾಲೆ ಗಾರನು ಸಂಪಗೆಯ ಹೂಗಳನ್ನು ತಂದು ಶಿವನಿಗೆ ಅರ್ಪಿಸಿದನು. ಅದರಿಂದ ಸುಪ್ರೀತನಾದ ಶಿವನು ವೃಷಭಮುಖನೆಂಬ ಗಣಪನನ್ನು ಕರೆದು ಆ ಪ್ರಸಾದವನ್ನು

ಸಭೆಯಲ್ಲಿದ್ದವರಿಗೆ ವಿನಿಯೋಗಿಸುವಂತೆ ಆಜ್ಞಾಪಿಸಲು ಆತನು ಪ್ರಸಾದವನ್ನು ಹಂಚುವ ಗಡಿಬಿಡಿಯಲ್ಲಿ ಕುಮಾರಸ್ವಾಮಿಗೆ ಕೊಡುವುದನ್ನು ಮರೆತು ಎಲ್ಲರಿಗೂ ಹಂಚಿದ್ದಾಯಿತೆಂದು ಬಿನ್ನೈಸಿದನು. ತನಗೆ ಪ್ರಸಾದವು ದೊರೆಯಲಿಲ್ಲವೆಂದು ಕುಮಾರನು ಶಿವನಿಗೆ ವಿಜ್ಞಾಪಿಸಲು ವೃಷಭಮುಖನು ತಾನು ಆತನಿಗೂ ಕೊಟ್ಟು ದಾಗಿ ಸಾಧಿಸಿದನು. ತುಂಬಿದ ಸಭೆಯಲ್ಲಿ ತನ್ನ ಸಮಕ್ಷದಲ್ಲಿಯೇ ಪ್ರಸಾದವನ್ನು ಕೊಡದೆ ಕೊಟ್ಟೆನೆಂದು ಸುಳ್ಳುಹೇಳಿದ ತಪ್ಪಿಗಾಗಿ ವೃಷಭಮುಖನು ಭೂಮಿಯಲ್ಲಿ ಮನುಷ್ಯನಾಗಿ ಒಂದು ಜನ್ಮವನ್ನು ಎತ್ತಿ, ಅಲ್ಲಿ ಶಿವಭಕ್ತರಾದ ಜಂಗಮರಿಗೆ ದಾನ ಸನ್ಮಾನಗಳನ್ನು ಮಾಡಿ, ತನ್ನ ತಪ್ಪಿಗೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡು, ಅನಂತರ ಕೈಲಾಸಕ್ಕೆ ಹಿಂದಿರುಗಿಬರಬೇಕೆಂದು ಶಿವನು ಆತನಿಗೆ ಆಜ್ಞಾಪಿಸಿದನು.

ಶಿವನ ಆಜ್ಞೆಯನ್ನು ಶಿರಸಾವಹಿಸಿದ ವೃಷಭಮುಖನು ಬಾಗೆವಾಡಿ ಅಗ್ರಹಾರದಲ್ಲಿ ಮಾದಿರಾಜನೆಂಬ ಶಿವಬ್ರಾಹ್ಮಣನ ಪತ್ನಿಯಾದ ಮಾದಾಂಬೆಯ ಗರ್ಭದಲ್ಲಿ "ಚಿಪ್ಪಿನೊಳ್ ಮುತ್ತು ಕಾಸಾರದೊಳ್ ಪಂಕಜಂ ಪುಟ್ಟುವಂತೆ" ಜನಿಸಿದನು. ಮಾತಾಪಿತೃಗಳು ಈ ಕಾರಣಿಕ ಶಿಶುವಿಗೆ ಜಾತಕರ್ಮವನ್ನು ಮಾಡಿ ಬಸವನೆಂದು ಹೆಸರಿಟ್ಟರು. ತನ್ನ ಬಾಲಲೀಲೆಯಿಂದ ತಾಯಿತಂದೆಗಳನ್ನು ಸಂತೋಷ ಪಡಿಸುತ್ತ ಬಸವಣ್ಣನು ಶೈಶವವನ್ನು ಕಳೆದನು.

"ಮರ್ತ್ಯಲೋಕದೊಳ್ ಪುಟ್ಟಿದ ಗಣೇಶ್ವರನಪ್ಪ ಬಸವರಾಜಂಗೆ ತಾಯಿ ತಂದೆಗಳಿಲ್ಲೆಂಬುದನಱಿುಪುವಂತೆ" ಬಸವಣ್ಣನ ಬಾಲ್ಯದಲ್ಲಿಯೇ ಆತನ ಮಾತಾ ಪಿತೃಗಳು ಗತಿಸಿದರು. ಆಗ ಈ ಬಾಲಕನು "ಶಿವಭಕ್ತಿ ಮುತ್ತಂತಿರ್ದ್ದ ಮುತ್ತಬ್ಬೆಯ ಪಕ್ಕದೊಳು ನಾಲ್ಕೆರಡು ವರ್ಷ ಸುಖದೊಳಿರೆ, ಬಾಲ್ಯವಿಮೋಚನವಾಗಿ ಹದಿನಾಱು ವರ್ಷದ ಯೌವನ" ಬಂದಿತು. ಆಗ ಬಸವರಾಜನು "ಜನನದ ಬಳಿವಿಡಿದೆಂತಕ್ಕೆ ಬಂದ ಜನ್ನವಂ ಶಿವಪೂಜೆಯಲ್ಲಿ ಸಮೆಯುವೇಳ್ಕುಂ" ಎಂದು ನಿರ್ಧರಿಸಿ, "ಶಿವಭಕ್ತಿಯುಂ ಕರ್ಮಮುಂ ಎಂದುಂ ಒಂದಾಗಿರದು" ಎಂದು ಬಗೆದು, ಪರಮ ವೈರಾಗ್ಯಯುಕ್ತನಾಗಿ, "ಕರ್ಮಲತೆಯಂತಿರ್ದ ಜನ್ನಿವಾರಮಂ ಕಳೆದು ಬಿಸುಟು", ಬಾಗೆವಾಡಿಯನ್ನು ಬಿಟ್ಟು ಹೊರಟು ಮಲಪ್ರಹರಿ ಕೃಷ್ಣ ವೇಣಿಗಳ ಸಂಗಮದಲ್ಲಿದ್ದ ಕಪ್ಪಡಿ ಸಂಗಮಕ್ಕೆ ಬಂದನು. ಆ ಊರಿನ ಬೀದಿಗಳಲ್ಲಿ ಸಂಚರಿಸುತ್ತಿರುವಾಗ ಒಂದು ಶಿವಾಲಯವನ್ನು ಕಂಡು ಪೂರ್ವಸ್ಮರಣೆಯುಂಟಾ ಗಲು ಅಲ್ಲಿಗೆ ಹೋಗಿ ಭಕ್ತಿಯಿಂದ ದೇವರಿಗೆ ನಮಸ್ಕರಿಸಿ ಶಿವಧ್ಯಾನಾಸಕ್ತನಾಗಿ ಕುಳಿತನು. ಈತನ ಭಕ್ತಿಯನ್ನು ನೋಡಿ ಸ್ಥಾನಪತಿಗಳಾದ ಈಶಾನ್ಯ ಗುರುಗಳು ಈತನು ಕಾರಣಿಕ ಪುರುಷನಾಗಿರಬೇಕೆಂದು ನಿಶ್ಚೈಸಿ—ಎಲೆ ಭಕ್ತ, ನೀನೆಲ್ಲಿಗೂ

ಹೋಗಬೇಡ, ಸಂಗಮೇಶ್ವರನ ಪೂಜೆಗೆ ಅಗ್ಗವಣಿಯನ್ನೂ ಹೂವನ್ನೂ ಪ್ರತಿ ದಿನವೂ ತಂದು ಶಿವನನ್ನು ಪೂಜೆಮಾಡಿ ಪ್ರಸಾದವನ್ನು ಸ್ವೀಕರಿಸುತ್ತಾ ಇಲ್ಲಿಯೇ ಸುಖವಾಗಿರೆಂದು ಹೇಳಿದರು. ಬಸವಣ್ಣನು ಅದಕ್ಕೆ ಒಪ್ಪಿ ಕೂಡಲ ಸಂಗಮೇಶ್ವರನನ್ನು ಪ್ರತಿ ದಿನವೂ ಪೂಜಿಸುತ್ತ ಕಪ್ಪಡಿ ಸಂಗಮದಲ್ಲಿ ಸುಖ ವಾಗಿದ್ದನು. ಆತನಿಗೆ ಶಿವನಲ್ಲಿದ್ದ ಭಕ್ತಿಯು ದಿನದಿನಕ್ಕೂ ಘಳಿಗೆ ಘಳಿಗೆಗೂ ಪ್ರಗಾಢವಾಗುತ್ತ ಬಂದಿತು.

ಹೀಗೆ ದಿನಗಳು ಕಳೆಯುತ್ತಿರಲು ಒಂದು ದಿನ ಬಸವಣ್ಣನು ಎಂದಿನಂತೆ ಭಕ್ತಿಯಿಂದ ಶಿವಪೂಜೆಮಾಡಿ ಪ್ರಸಾದವನ್ನು ಸ್ವೀಕರಿಸಿ ರಂಗಮಂಟಪದಲ್ಲಿ "ಸಂಗಮಧ್ಯಾನ ನಿದ್ರಾಮುದ್ರೆ"ಯಲ್ಲಿದ್ದಾಗ ಸಂಗಮೇಶ್ವರನು ಆತನ ಸ್ವಪ್ನದಲ್ಲಿ ಬಂದು, "ಎಲೆ ಮಗನೆ, ಬಸವಣ್ಣ, ನಿನ್ನಂ ಮಹೀತಳದೊಳು ಮೆಱೆದಪೆವು, ನೀಂ ಬಿಜ್ಜಳರಾಯನಿರ್ಪ ಮಂಗಳವಾಡಕ್ಕೆ ಪೋಗು" ಎಂದಂತಾಗಲು, ನಿದ್ರೆ ಯಿಂದೆಚ್ಚತ್ತು ಕಣ್ದೆರೆದು ಸುತ್ತಮುತ್ತನೋಡಿ, ಬೆಚ್ಚಿ "ದೇವದೇವ ಸಂಗ, ಕೆಟ್ಟೆ ಕೆಟ್ಟೆಂ. ತೊಟ್ಟನಿಂತು ಹೋಗೆಂಬರೆ? ಗಗನದಿಂದಿಳಿವಂಗೆ ಆಧಾರಮಾಗುತ್ತೆ ತಪ್ಪುವರೆ? ಅರ್ಚಿಸಿತಕ್ಕೆ ಫಲವಾಯ್ತು!" ಎಂದು ಗೋಳಾಡಿ ಎಂದಿನಂತೆ ಶಿವ ಪೂಜೆಮಾಡಿ "ಮೋಹದ ಮುನಿಸಿ"ನಿಂದ ಆ ದಿನ ಪ್ರಸಾದವನ್ನು ಸ್ವೀಕರಿಸದೆ ಮುಸುಕಿಟ್ಟು ಪಶುಪತಿಯ ಪದತಲದಲ್ಲಿ ನಿರ್ವೇಗದಿಂದ ಬಿದ್ದಿರಲು, ಸಂಗಮೇಶ್ವ ರನು ಮತ್ತೆ ಕನಸಿನಲ್ಲಿ ಕಾಣಿಸಿಕೊಂಡು "ಎಲೆ ಮಗನೆ, ಎಲೆ ಕಂದ, ಎಲೆ ಬಸವ, ನಿನ್ನನಗಲಿ ನಾನಿರಲಾಱೆ. ನಿನಗಿನಿತು ನಿರೋಧವೇಕೆ? ನಿನ್ನೊಡನೆ ಬಪ್ಪೆಂ. ನಾಳೆ ಮಧ್ಯಾಹ್ನದೊಳು ಶುದ್ಧಾಂಗನಾಗಿ ಬಂದು ನಂದಿಕೇಶ್ವರನ ಮುಂದೆನ್ನಂ ನೆನೆವುತ್ತಂ ಕುಳ್ಳಿರೆ ವೃಷಭನ ಮುಖಾಂತರದಿಂದಾವೆ ಬಂದಪೆವು. ಆತಂ ನಿನಗೆ ಸದ್ಗುರು" ಎಂದು ಹೇಳಿ ಅಂತರ್ಧಾನನಾದನು. ಆಗ "ಹರಕರುಣೋದಯ ವಾದಂತೆ ಅರುಣೋದಯ"ವಾಗಲು ಬಸವಣ್ಣನು ಎದ್ದು ಎಂದಿನಂತೆ ಶಿವಾರ್ಚನೆ ಮಾಡಿ ರಂಗಮಂಟಪಕ್ಕೆ ಬಂದು ಅಲ್ಲಿದ್ದ ನಂದಿಗೆ ನಮಸ್ಕಾರಮಾಡಿ ಸಂಗನನ್ನು ಧ್ಯಾನಿಸುತ್ತ ಕುಳಿತನು. ನಂದಿಯ ಮುಖದಿಂದ ಸಂಗನು ಲಿಂಗರೂಪಾಗಿ ಬರಲು ಬಸವಣ್ಣನು ಅದನ್ನು ತನ್ನ ಹಸ್ತಕ್ಕೆ ಬಿಜಯಂಗೆಯ್ಸಿಕೊಂಡನು. ಅನಂತರ ನಂದಿಯು ಪ್ರತ್ಯಕ್ಷನಾಗಿ ಆತನಿಗೆ ಪಂಚಾಕ್ಷರಿಯನ್ನು ಉಪದೇಶಿಸಿ ಅಂತರ್ಧಾನನಾದನು. ಬಸವಣ್ಣನು ಸಂಗಮೇಶ್ವರನ ಸಾನ್ನಿಧ್ಯವನ್ನು ಬಿಡಲಾರದೆ ಕಪ್ಪಡಿ ಸಂಗಮದಲ್ಲಿಯೇ ಇದ್ದನು. ಶಿವನು ಮತ್ತೆ ಕನಸಿನಲ್ಲಿ ಬಂದು ಬಿಜ್ಜಳನ ರಾಜಧಾನಿಗೆ ಹೋಗುವಂತೆ ಆಜ್ಞಾಪಿಸಲು ಬಸವಣ್ಣನು—ಇದೇನು ಸಂಗನು

ಮತ್ತೆಮತ್ತೆ ಹೋಗೆನ್ನುತ್ತಾನೆ, ಆಗಲಿ ನೋಡುತ್ತೇನೆ. ನನಗೆ ಅಕ್ಷರಜ್ಞಾನವಿದೆ. ಅದನ್ನೇ ಮಾರುತ್ತೇನೆ, ಅದರಿಂದ ಬಂದ ಹೊನ್ನನ್ನು ಜಂಗಮರಿಗೆ ಕೊಟ್ಟು ಅವರ ಅನುಗ್ರಹವನ್ನು ಪಡೆದು ಧನ್ಯನಾಗುತ್ತೇನೆ—ಎಂದು ಮನಸ್ಸಿನಲ್ಲಿ ನಿಶ್ಚಯಿಸಿದನು.

ಅನಂತರ ಬಸವಣ್ಣನು ಗಣಕ ವೃತ್ತಿಗೆ ತಕ್ಕ ವೇಷವನ್ನು ಧರಿಸಿ ಸಂಗನ ಅನುಜ್ಞೆಯನ್ನು ಪಡೆದು ಮಂಗಳವಾಡಕ್ಕೆ ಹೋದನು. ಆ ಪಟ್ಟಣದಲ್ಲಿ ಸಂಚರಿಸುತ್ತ ಅದರ ಸಂಪತ್ತನ್ನು ನೋಡಿ ಬಹು ಸಂತೋಷಪಡುತ್ತ ಬಿಜ್ಜಳರಾಯನ ಅರಮನೆಗೆ ಬಂದು ಕರಣಶಾಲೆಗೆ ಹೋಗಿ ಅಲ್ಲಿ ಲೆಕ್ಕಬರೆಯುತ್ತ ಕುಳಿತಿದ್ದ ಗಣಕರ ಕಾರ್ಯವನ್ನು ನೋಡುತ್ತಾ ನಿಂತಿದ್ದನು. ಸ್ವಲ್ಪಹೊತ್ತು ಹಾಗೆ ನೋಡುತ್ತಿರಲು ಅಲ್ಲಿಗೆ ಭಂಡಾರಿಯಾದ ಸಿದ್ಧದಂಡೇಶನು ಬಂದು ಭಂಡಾರದಲ್ಲಿರಬೇಕಾದ ಹಣದ ಮೊತ್ತವೆಷ್ಟೆಂಬುದನ್ನು ಕೇಳಲು ಕರಣಿಕರು ಐದುಃಕೋಟಿ ಐವತ್ತುಲಕ್ಷವೆಂದು ಹೇಳಿದರು. ಲೆಕ್ಕಾಚಾರದಲ್ಲಿ ಗಣಕರು ತಪ್ಪುಮಾಡಿದ್ದುದನ್ನು ಕಂಡಿದ್ದ ಬಸವಣ್ಣನು "ಭಕ್ತನೊಡವೆ ಕೆಡಲಾಗದೆಂ"ದು ಬಗೆದು ಕರಣಿಕರು ತಪ್ಪಿರುವುದನ್ನು ಭಂಡಾರಿಯ ಗಮನಕ್ಕೆ ತಂದನು. ಮತ್ತೆ ಲೆಕ್ಕ ಮಾಡಿಸಲು ಭಂಡಾರದಲ್ಲಿ ಇರಬೇಕಾದದ್ದು ಐದುಃ ಕೋಟಿ ಮಾತ್ರ ಎಂದು ಸ್ಥಿರಪಟ್ಟಿತು. ಬಸವಣ್ಣನ ಗಣಿತಶಾಸ್ತ್ರ ಕುಶಲತೆಗೆ ಮೆಚ್ಚಿದ ಸಿದ್ಧದಂಡಾಧೀಶನು ಆತನನ್ನು ತನ್ನೊಡನೆ ಅರಮನೆಗೆ ಕರೆದುಕೊಂಡು ಹೋಗಿ ಕರಣಶಾಲೆಯಲ್ಲಿ ನಡೆದ ಸಂಗತಿಯನ್ನು ಬಿಜ್ಜಳನಿಗೆ ಶ್ರುತಪಡಿಸಿ ಆತನ ಅನುಮತಿಯನ್ನು ಪಡೆದು ವರ್ಷಕ್ಕೆ ೧೦೧ ಹೊನ್ನು ಜೀವಿತವನ್ನು ಗೊತ್ತುಮಾಡಿ ಬಸವಣ್ಣನನ್ನು ತನ್ನ ಭಂಡಾರದ ಕೆಲಸದಲ್ಲಿ ನಿಯಮಿಸಿಕೊಂಡನು. ಅನಂತರ ಆತನನ್ನು ತನ್ನ ಮನೆಗೆ ಕರೆದುಕೊಂಡುಹೋಗಿ ಆತನ ಪೂರ್ವೋತ್ತರವನ್ನು ವಿಚಾರಿಸಲು "ಕುಲವೊಂದೆ ಕುಲವಾಗೆ, ಗೋತ್ರವಂತನುವಾಗೆ, ನೆಲೆವಿಚಾರಿಸೆ ತನ್ನ ಸಂಬಂಧವೊಂದಾಗೆ" ಅತ್ಯಂತ ಸಂತೋಷಪಟ್ಟು ಆತನನ್ನು ತನ್ನ ಮನೆಯಲ್ಲಿಯೇ ಇಟ್ಟುಕೊಂಡನು. ಸಿದ್ಧದಂಡಾಧೀಶನಿಗೆ ಬಸವಣ್ಣನ ಮೇಲಿದ್ದ ಪ್ರೀತಿ ದಿನದಿನಕ್ಕೂ ಹೆಚ್ಚುತ್ತಾ ಹೋಯಿತು. ಮಕ್ಕಳಿಲ್ಲದಿದ್ದ ಆತನು ಬಸವಣ್ಣನನ್ನು ತನ್ನ ಮಗನಂತೆಯೇ ಭಾವಿಸಿ ಮನೆಯ ಸರ್ವಾಧಿಕಾರವನ್ನೂ ಆತನಿಗೇ ಒಪ್ಪಿಸಿದನು. ಕೆಲವುಕಾಲ ಕಳೆದ ಮೇಲೆ ಸಿದ್ಧದಂಡೇಶನು ಮೃತನಾಗಲು ಬಿಜ್ಜಳನ ಆಜ್ಞಾನುಸಾರವಾಗಿ ಬಸವಣ್ಣನೇ ಆತನಿಗೆ ಶವಸಂಸ್ಕಾರ ಮಾಡಿದನು. ಬಸವಣ್ಣನ ಪರಿಶುದ್ಧಚಾರಿತ್ರವನ್ನೂ ಕಾರ್ಯದಕ್ಷತೆಯನ್ನೂ ಕಂಡು ಮೆಚ್ಚಿದ್ದ ಬಿಜ್ಜಳನು ಸಿದ್ಧದಂಡೇಶನ ಆಸ್ತಿಯನ್ನೆಲ್ಲಾ ಬಸವಣ್ಣನಿಗೆ ಬರೆಸಿಕೊಟ್ಟುದೂ ಅಲ್ಲದೆ ಅವನ ಅಧಿಕಾರವನ್ನೂ ಆತನಿಗೆ

ಒಪ್ಪಿಸಿದನು. ಇದಾದ ಕೆಲವು ಕಾಲದಮೇಲೆ ಬಸವಣ್ಣನು "ಸತ್ಕುಲಸಾದೃಶ್ಯ ಸುಶೀಲೆ"ಯರಾದ ಗಂಗಾದೇವಿ ಮಾಯಿದೇವಿಯರನ್ನು ಮದುವೆಯಾದನು.

ಬಿಜ್ಜಳನ ರಾಜಧಾನಿಗೆ ಆಗಂತುಕನಾಗಿ ಬಂದಿದ್ದ ಬಸವಣ್ಣನು ಹೀಗೆ ಕಾಲಕ್ರಮದಲ್ಲಿ ಅತ್ಯುನ್ನತಪದವಿಗೇರಿದನು. ಇತ್ತಕಡೆ ಆತನ ಭಕ್ತಿಯೂ ಒಳಗೊಳಗೇ ಬೆಳೆದು ಮಹಿಮಾಸಂಪನ್ನವಾಯಿತು. ಬಿಜ್ಜಳನ ಭಂಡಾರಿಯಾದ ಬಸವಣ್ಣನು ಭಕ್ತಿಭಂಡಾರಿಯೂ ಆದನು. ಆಕಸ್ಮಿಕವಾಗಿ ನಡೆದ ಒಂದು ಘಟನೆಯು ಈತನ ಭಕ್ತಿಯ ಮಹಿಮೆಯನ್ನು ಪ್ರಕಾಶಕ್ಕೆ ತಂದಿತು.

ಒಂದು ದಿನ ಬಿಜ್ಜಳನು ಸಭೆಯಲ್ಲಿದ್ದಾಗ ಒಬ್ಬ ಮಾಲೆಗಾರನು ಒಂದು ಕೇದಗೆಯ ಹೂವನ್ನು ತಂದು ಆತನಿಗೆ ಅರ್ಪಿಸಿದನು. ಅರಸನು ಅದನ್ನು ಬಿಚ್ಚಿ ಅದರೊಳಗಣ ಒಂದು ಎಸಳನ್ನು ತನ್ನ ಪಕ್ಕದ ಗದ್ದುಗೆಯಲ್ಲಿ ಕುಳಿತಿದ್ದ ಬಸವಣ್ಣನಿಗೆ ಕೊಟ್ಟನು. ತನಗೆ ದೊರೆತುದನ್ನೆಲ್ಲಾ ಶಿವಾರ್ಪಣ ಮಾಡುತ್ತಿದ್ದ ಬಸವಣ್ಣನು ತಾನು ಧರಿಸಿದ್ದ ಲಿಂಗಕ್ಕೆ ಆ ಎಸಳನ್ನು ಅರ್ಪಿಸಿದನು. ಬಸವಣ್ಣನ ಉನ್ನತಸ್ಥಿತಿಯನ್ನು ನೋಡಿ ಅಸೂಯೆಗೊಂಡಿದ್ದವರಲ್ಲಿ ಒಬ್ಬನಾದ ನಾರಣಭಟ್ಟನು ಅದನ್ನು ನೋಡಿ—ಶಿವಲಿಂಗಕ್ಕೆ ಕೇದಗೆಯ ಹೂವನ್ನು ಏರಿಸಬಾರದೆಂದು ಶಿವಾಗಮಗಳಲ್ಲಿ ನಿಯಮವಿದೆ; ಅದನ್ನು ಮೀರಿ ಬಸವಣ್ಣನು ಶಿವಾರ್ಪಿತಮಾಡಿದ್ದು ತಪ್ಪು ಎಂದು ಆಕ್ಷೇಪಣೆಯನ್ನೆತ್ತಲು ಬಸವಣ್ಣನು ನಸುನಗುತ್ತಾ "ಎಲೆ ಮರುಳುವಿಪ್ರ, ಕರ್ಮಜಡನೆ, ದೇವಂ ಭಕ್ತರ್ ಕೊಟ್ಟಡೆ ಕೈಕೊಳ್ಳ"ನೆಂದು ಹೇಳಲು, ಹಾಗೆ ಕೈಕೊಳ್ಳನೆಂಬುದಕ್ಕೆ ಕುರುಹೇನೆಂದು ಬಿಜ್ಜಳನು ಕೇಳಿದನು. ಬಸವಣ್ಣನು ತನ್ನ ಅಕ್ಕಪಕ್ಕದ ಮಾಹೇಶ್ವರರ ಕಕ್ಷಪುಟಗಳಲ್ಲಿದ್ದ ಸೆಜ್ಜೆಗಳನ್ನು ತೆರೆಯಿಸಿ ತೋರಿಸಲು ಆ ಎಲ್ಲ ಲಿಂಗಗಳ ಉತ್ತಮಾಂಗಗಳಲ್ಲಿಯೂ ಅಲ್ಲದೆ ಮಂಗಳವಾಡದ ಮಹಾಲಿಂಗದ ಅಂಘ್ರಿಗಳಲ್ಲಿಯೂ ಬಸವಣ್ಣನು ಅರ್ಪಿಸಿದ ಕೇದಗೆಯ ಎಸಳನ್ನು ಹೋಲುವ ನುಣ್ಣೆಸಳುಗಳಿದ್ದುವು. ಬಿಜ್ಜಳನು ಬಸವಣ್ಣನ ಮಹಿಮೆಗೆ ಮೆಚ್ಚಿ, ಆತನ ಪಾದಕ್ಕೆರಗಿ ಅಂದಿನಿಂದ ಆತನು ತನ್ನ ಭಂಡಾರಿ ಎಂಬುದನ್ನು ಮರೆತು ಸಾಕ್ಷಾತ್ ಸಂಗಮೇಶ್ವರನೆಂದೇ ಭಾವಿಸತೊಡಗಿದನು.

ಬಸವಣ್ಣನ ಕೀರ್ತಿ ದೇಶವಿದೇಶಗಳಲ್ಲಿ ಹಬ್ಬಿತು. ಶಿವಶರಣರು ತಂಡತಂಡವಾಗಿ ಮಂಗಳವಾಡಕ್ಕೆ ಬರಲಾರಂಭಿಸಿದರು. ಬಸವಣ್ಣನು ಬಂದ ಜಂಗಮಕ್ಕೆ ಉಣಲು ಮೃಷ್ಟಾನ್ನವನ್ನೂ ತೊಡಲು ದಿವ್ಯವಸ್ತ್ರಗಳನ್ನೂ ಧರಿಸಲು ರತ್ನಖಚಿತವಾದ ಆಭರಣಗಳನ್ನೂ ಕೊಟ್ಟು ಅವರನ್ನು ಆರಾಧಿಸುತ್ತಿದ್ದನು. ಹೀಗೆ ದಾನ ಸನ್ಮಾನಗಳನ್ನು ಪಡೆದ ಜಂಗಮರು ರಾಜವೀಧಿಗಳಲ್ಲಿ ರಾಜಪುತ್ರರಂತೆ ಸುಳಿ

ದಾಡುವುದನ್ನು ನೋಡಿ ಪುರಜನರೂ ಪರಸಮಯಿಗಳೂ ಕೌತುಕಪಟ್ಟರು. ಬಿಜ್ಜಳನ ಗುರುವಾದ ನಾರಣಕ್ರಮಿತನೇ ಮೊದಲಾದ ವೈಷ್ಣವರು ಜಂಗಮರ ಸಿರಿಯನ್ನು ನೋಡಿ "ಅನುತಾಪದೊಳುರಿದು, ಮನಂ ಕರಿಮುರಿವೋಗಿ, ನಿಲಲಾಱದೆ ಗಳಗಳನೆ" ಬಿಜ್ಜಳನಲ್ಲಿಗೆ ಓಡಿಬಂದು "ಎಲೆ ಮರುಳರಸ, ಬಸವಂಗೆ ಮರುಳಾದೆ. ರಾಜ್ಯದೆಲ್ಲರಂ ಭಕ್ತರ್ಗೆ ಬಱಿದಾಯಿತ್ತು, ಭಂಡಾರಂ ಸೂಱೆವೋದುದು" ಎಂದು ಚಾಡಿ ಹೇಳಿದರು. ಬಿಜ್ಜಳನು ಅವರ ಮಾತನ್ನು ನಂಬಿ ಕರಣಿಕರನ್ನು ಕರಸಿ ಈಗ ಭಂಡಾರದಲ್ಲಿರಬೇಕಾದ ಹಣವೆಷ್ಟು ಎಂದು ಕೇಳಲು, ಅವರು ಲೆಕ್ಕಹಾಕಿ ಹದಿನೆಂಟುಕೋಟಿ ಎಂದು ತಿಳಿಸಿದರು. ಆಗ ಬಿಜ್ಜಳನು ಬಸವಣ್ಣನನ್ನು ಕರಸಿ "ನಿಮ್ಮಂ ನಂಬಿ ಭಂಡಾರಮಂ ಕೊಟ್ಟಡೆನ್ನನಿಂತು ಕೆಡಿಸುವರೆ? ರಾಜ್ಯಮಂ ನೀರೊಳದ್ದುವರೆ? ನಿಂದ ಹೊನ್ನಿಂಗೆ ನಿರ್ಣಯಮಂ ಕೊಡುವುದು" ಎಂದು ಹೇಳಿದನು. ಚಾಡಿಕೋರರ ಮಾತು ರಾಜನನ್ನು ಮರುಳುಗೊಳಿಸಿರಬೇಕೆಂದು ನಿಶ್ಚಯಿಸಿ ಬಸವಣ್ಣನು ಬಿಜ್ಜಳನನ್ನು ಭಂಡಾರಕ್ಕೆ ಕರೆದುಕೊಂಡುಹೋಗಿ, ಮುದ್ರಿಸಿದ ಪೆಟ್ಟಿಗೆಗಳಲ್ಲಿದ್ದ ಹಣವನ್ನು ತೆಗೆಸಿ ಎಣಿಸಲು ಅದು ಹದಿನೆಂಟುಕೋಟಿಗೆ ದ್ವಿಗುಣವಾಗಿ, ತ್ರಿಗುಣವಾಗಿ, ದಶಗುಣವಾಗಿ, ಶತಗುಣವಾಗಿ, ವೃದ್ಧಿಯಾಗಿರಲು ಗಣಕರು ಲೆಕ್ಕಿಸಲಾರದೆ ಬೆರಗಾದರು, ಪರಸಮಯಿಗಳ ಮುಖ ಬಿಳುಪೇರಿತು, ಬಿಜ್ಜಳನಿಗೆ ಲಜ್ಜೆಯಾಯಿತು, ಶರಣರ ಮುಖ ಅರಳಿತು. ತನ್ನ ಅವಿಜ್ಞತೆಗಾಗಿ ಮರುಗಿ ಬಿಜ್ಜಳನು ಬಸವಣ್ಣನ ಕ್ಷಮೆಯನ್ನು ಯಾಚಿಸಿದನು.

ಬಸವಣ್ಣನು ತನ್ನ ಮನೆಗೆ ಬಂದ ಜಂಗಮರಿಗೆಲ್ಲ ದಾನಧರ್ಮಗಳನ್ನು ಮಾಡುತ್ತಾನೆಂಬುದನ್ನು ಕೇಳಿದ ಕುಹಕರು ಕೆಲವರು ಒಂದು ದಿನ ಜಂಗಮ ವೇಷವನ್ನು ಧರಿಸಿ ಲಿಂಗಕ್ಕೆ ಬದಲಾಗಿ ಬದನೆಯಕಾಯಿಯನ್ನು ಕಟ್ಟಿಕೊಂಡು ಬಸವಣ್ಣನ ಮನೆಗೆ ಬಂದರು. ಬಸವಣ್ಣನು ಅವರನ್ನು ಸತ್ಕರಿಸಿ ಲಿಂಗಾರ್ಚನೆಗಾಗಿ "ಸಜ್ಜೆಯನ್ನು ಉಪ್ಪರಿಸಿ" ಎಂದು ಹೇಳಲು ಅವರು ಭಯಪಟ್ಟು ಯತ್ನವಿಲ್ಲದೆ ಹಾಗೆಯೇ ಮಾಡಿದರು. ಬಸವಣ್ಣನ ಭಕ್ತಿಯ ಮಹಿಮೆಯಿಂದ ಅವರು ಕಟ್ಟಿಕೊಂಡಿದ್ದ ಬದನೆಯಕಾಯಿ ಲಿಂಗವಾಗಿತ್ತು; ಅವರಲ್ಲಿ ಭವಿತನ ತೊಲಗಿ ಸದ್ಭಕ್ತಿಯುದಿಸಿತು. ಅಂದಿನಿಂದ ಬಸವಣ್ಣನು ಬದನೆಯಕಾಯಿಯನ್ನು ವರ್ಜಿಸಿದನು.

ಲಿಂಗ ಜಂಗಮ ಒಂದೇ ಎಂಬ ಬಸವಣ್ಣನ ಭಾವನೆಯನ್ನು ಒರೆಗೆ ಹಚ್ಚುವ ಒಂದು ಸನ್ನಿವೇಶ ಒದಗಿತು. ಒಮ್ಮೆ ಬಸವಣ್ಣನು ಶಿವಶರಣರ ಗೋಷ್ಠಿಯಲ್ಲಿದ್ದಾಗ ಬಸವಣ್ಣನ ಮನೆಯ ಗೋವಳನು ಓಡಿಬಂದು ಕಳ್ಳರು ಭಕ್ತರ ವೇಷದಿಂದ

ಬಂದು ಹಸುಗಳನ್ನು ಹೊಡೆದುಕೊಂಡು ಹೋದರೆಂದು ಬಿನ್ನೈಸಲು, ಬಸವಣ್ಣನು "ಮರುಳು ಗೋವಳ, ಭಕ್ತರೇಂ ಕಳ್ಳರೆ? ಶಿವವೇಷಮುಂ ಕಳವುವೊಂಪೆಡೆ ಯೊಳಿರ್ಪುವೆ? ತಮ್ಮೊಡವೆಯುಂ ತಾವೆ ಕೊಳ್ಳರೆ?" ಎಂದು ಹೇಳಿ ಲಿಂಗಧಾರಿ ಗಳಲ್ಲಿ ತನಗಿದ್ದ ಗೌರವವನ್ನು ಮೆರೆದು ಹಸುಗಳ ಹಿಂದೆ ಕರುಗಳನ್ನೂ ಕಳುಹಿಸಿ ಕೊಡುವಂತೆ ಅಪ್ಪಣೆಮಾಡಿದನು.

ಇದಾದ ಕೆಲವು ದಿನಗಳ ಮೇಲೆ ಬಸವಣ್ಣನು ಜಂಗಮಪ್ರಾಣಿ ಎಂಬುದನ್ನು ಜಗತ್ತಿಗೆ ತೋರಿಸಿಕೊಟ್ಟ ಒಂದು ಘಟನೆ ನಡೆಯಿತು. ಒಂದು ದಿನ ಆತನು ಶಿವಧ್ಯಾನ ಮಾಡುತ್ತಾ ಮಲಗಿರುವಾಗ ಆತನ ದರ್ಶನಕ್ಕೆಂದು ದೂರದೇಶದಿಂದ ಕೆಲವರು ಶರಣರು ಬಂದರು. ಬಸವಣ್ಣನು ಮಲಗಿರುವನೆಂದೂ, ಆತನನ್ನು ನೋಡಲು ಅದು ಸಮಯವಲ್ಲೆಂದೂ ಬಾಗಿಲ ಕಾಯುವವನು ತಿಳಿಸಲು ಅವರು ಅಸಮಾಧಾನದಿಂದ ಹಿಂದಿರುಗಿ ಹೊರಟುಹೋದರು. ಆಗ ಬಸವಣ್ಣನ ಜೀವವೂ ಶರಣರನ್ನು ಹಿಂಬಾಲಿಸಿ ಹೋಯಿತು. ಶಿವಾರ್ಚನೆಯ ಸಮಯವಾದರೂ ಬಸ ವಣ್ಣನು ಏಳದಿರುವುದನ್ನು ನೋಡಿ ಆತನ ಹೆಂಡತಿಯರು ಆತನನ್ನು ಎಬ್ಬಿಸಲು ಬಸವಣ್ಣನು ಏಳದೆ ಸುಮ್ಮನಿದ್ದನು. ಆಗ ಅವರು ಆತನ ಮುಸುಕನ್ನು ತೆಗೆದು ನೋಡಲು ಪ್ರಾಣವಾಯುವೇ ಇರಲಿಲ್ಲ. ಮನೆಯಲ್ಲಿ ಗದ್ದಲವೆದ್ದಿತು; ಮಾಹೇ ಶ್ವರರೆಲ್ಲರೂ ಬಂದು ಸೇರಿದರು. ಎಲ್ಲರಿಗೂ ದಿಗ್ಭ್ರಮೆಯಾಯಿತು. ಅವರಲ್ಲಿ ಒಬ್ಬ ಶರಣನು ಇದರಲ್ಲಿ ಏನೋ ರಹಸ್ಯವಿರಬೇಕೆಂದು ಬಗೆದು ಪಡಿಯರನನ್ನು ಕರಸಿ ವಿಚಾರಿಸಲು ಬಸವಣ್ಣನನ್ನು ಅರಸಿ ಬಂದ ಕೆಲವರು ಶಿವಭಕ್ತರು ಆತನನ್ನು ನೋಡದೆ ಹಿಂತಿರುಗಿ ಹೋದರೆಂದು ತಿಳಿದುಬಂದಿತು. ಆಗ ಆತನು "ಭಕ್ತರೊಡನೆ ಬಸವಣ್ಣನೂ ಹೋಗಿದ್ದಾನೆ; ಭಕ್ತರು ಬಂದರೆ ಬಸವನೂ ಬರುವನು" ಎಂದು ತಿಳಿಸಿದನು. ಎಲ್ಲ ಕಡೆಯಲ್ಲಿಯೂ ಹುಡುಕಿ ಆ ಹೊಸ ಭಕ್ತರನ್ನು ಮನೆಗೆ ಕರೆತರಲು ಬಸವಣ್ಣನಿಗೆ ಜೀವಬಂದಿತು.

ಬಸವಣ್ಣನು ಜಂಗಮರಲ್ಲಿ ಮೇಲು ಕೀಳೆಂಬ ಭೇದವನ್ನು ಮಾಡುತ್ತಿರಲಿಲ್ಲ. ಶಿವಭಕ್ತರಾದ ಹೊಲೆಯರನ್ನು ಹಿರಿಯಭಕ್ತರೆಂದು ಗೌರವಿಸುತ್ತಿದ್ದನು. ಇದರಿಂದ ವರ್ಣಾಶ್ರಮ ಪ್ರೇಮಿಗಳಿಗೆ ಅಸಮಾಧಾನವುಂಟಾಗಿತ್ತು. ಒಂದು ದಿನ ಬಸ ವಣ್ಣನು ದಂಡಿಗೆಯಲ್ಲಿ ಕುಳಿತು ಹಿರಿಯ ಮಾಹೇಶ್ವರರ ಕೇರಿಗಳ ಪಕ್ಕದಲ್ಲಿ ಬರುತ್ತಿದ್ದಾಗ ಶಿವಲಿಂಗಾರೋಗಣೆಯ ಸಮಯವಾಗಿರಲು ದಂಡಿಗೆಯಿಂದಿಳಿದು ಪ್ರಸಾದಸ್ವೀಕಾರಕ್ಕಾಗಿ ಕಂಬಳಿಯ ನಾಗಿದೇವನೆಂಬ ಮಾಹೇಶ್ವರನ ಮನೆ ಯನ್ನು ಪ್ರವೇಶಿಸಿದನು. ಇದನ್ನು ಕಂಡ ವೈಷ್ಣವರ ಬೇಹಿನವನೊಬ್ಬನು

ಪಟ್ಟಣಕ್ಕೆ ಓಡಿಬಂದು ಬಸವಣ್ಣನು ಹೊಲೆಗೇರಿಗೆ ಹೋಗಿ ಹೊಲೆಯರ ಮನೆಯಲ್ಲಿ ಊಟಮಾಡುತ್ತಿರುವನೆಂದು ಹೇಳಿದನು. ನಾರಣಕ್ರಮಿತ, ವಿಷ್ಣುಪೆದ್ದಿಗಳೇ ಮೊದಲಾದ ಬ್ರಾಹ್ಮಣರು ಬಿಜ್ಜಳನ ಬಳಿಗೆ ಹೋಗಿ—ಬಸವನ ನಡವಳಿಕೆ ದಿನದಿನಕ್ಕೆ ವಿಪರೀತವಾಗುತ್ತಿದೆ. ಈ ದಿನ ಈ ಗಳಿಗೆಯಲ್ಲಿ ಆತನು ಹೊಲೆಗೇರಿಯಲ್ಲಿ ಒಬ್ಬ ಭಕ್ತನ ಮನೆಯಲ್ಲಿ ಊಟಮಾಡುತ್ತಿರುವನು. ಅಲ್ಲಿಂದ ನಿನ್ನ ಸಭೆಗೂ ಬಂದು ಹೊಲೆಗಲಸುತ್ತಾನೆ. ಹೀಗಾದರೆ ನಾವು ಇಲ್ಲಿ ಇರಲಾಗುವುದಿಲ್ಲ ಎಂದು ದೂರುಹೇಳಲು, ಅವರನ್ನು ಬಿಜ್ಜಳನು ಸಮಾಧಾನಪಡಿಸಿ ಬಸವಣ್ಣನಿಗೆ ಹೇಳಿ ಕಳುಹಿಸಿದನು. ಹೊಲೆಯರನ್ನು ಮುಟ್ಟಿಬಂದು ಎಲ್ಲಿ ಓಲಗಶಾಲೆಯನ್ನು ಪ್ರವೇಶಿಸುವನೋ ಎಂಬ ಭಯದಿಂದ ರಾಜಾಂಗಣದ ಬಯಲಿನಲ್ಲಿಯೇ ಸಭೆ ಸೇರಿಸಿದನು. ಬಸವಣ್ಣನು ಬಂದೊಡನೆಯೇ ಬಿಜ್ಜಳನು "ಎಲೆ ಬಸವಣ್ಣ, ಸುವರ್ಣಂ ಕಮ್ಮಿತಾದಂತೆ ವಿಪ್ರಕುಲಕೆ ಅನುಕೂಲಮಪ್ಪ ಶಿವಭಕ್ತಿಯಂ ಪೊದ್ದಿರ್ದು ಸದಾಚಾರದಿಂ ಸುಖಿಯಾಗಿರ್ಪುದನೊಲ್ಲದೆ ಅತಿಭಕ್ತಿ ತಲೆಗೇಱಿ, ಹಿರಿಯ ಮಾಹೇಶ್ವರರೆಂದು ಪೊಲೆಗಲಸಿ ಅವರ ಮನೆಯೊಳುಂಡುದಲ್ಲದೆ ಇಲ್ಲಿ ಬಂದು ಎಲ್ಲರಂ ಗೋಜಾಗತಂ ಮಾಳ್ಪುದು ಮಾರ್ಗವಲ್ಲ" ಎಂದು ಆಕ್ಷೇಪಿಸಲು ಬಸವಣ್ಣನು ರೇಗಿ "ಎಲೆ ಬುದ್ಧಿಯಿಲ್ಲದ ಭೂಪ, ನಾರಣಕ್ರಮಿತರ ಕೇರಿಯಂ ಪೊಕ್ಕೆನೆ? ಮುಕುಂದ ಭಟ್ಟರ ಮನೆಯೊಳುಂಡೆನೆ? ಹರನನಱಿಯದ ಹೊಲೆಯರ ಮನೆಯಂ ಹೊಕ್ಕುಂಡುದಿಲ್ಲ" ಎಂದು ಬಿಜ್ಜಳನಿಗೆ ಉತ್ತರ ಕೊಟ್ಟನು. ಅದನ್ನು ಕೇಳಿ ಬಿಜ್ಜಳನು ಕೋಪದಿಂದ "ವೇದಶಾಸ್ತ್ರ ಪುರಾಣಾಗಮ ವಿಧಿಯಿಂ ನಡೆವ ವಿಪ್ರರಂ ಹೊಲೆಯರೆಂದು, ಶಿವಭಕ್ತನಾದ ಹೊಲೆಯನಂ ಉತ್ತಮನೆಂಬುದಕ್ಕೆ ಪ್ರಮಾಣೇನು? ವಿಪ್ರರ ಮೈಯ ಕೊಯ್ಯೆ ನೆತ್ತರ್ ಭಕ್ತರ ಮೈಯೊಳ್ ಪಾಲ್ ಸುರಿದಪುದೆ?" ಎಂದು ಕೇಳಲು, ಬಸವಣ್ಣನು "ತಪ್ಪದು ತಪ್ಪದೆಲೆ ಅರಸ, ನೀನೆಂದಂತೆ ವಿಪ್ರರ ಮೈಯೊಳು ನೆತ್ತರು, ಭಕ್ತರ ಮೈಯೊಳು ಪಾಲ್ ಸುರಿಯದಿರ್ದಡೆ ಸಂಗಂಗೆ ದೂರಂ, ಶರಣರ್ಗೆ ದೂರಂ" ಎಂದು ಪ್ರತಿಜ್ಞೆಮಾಡಿ, ಕಂಬಳಿಯ ನಾಗಿದೇವನನ್ನು ಕರಸಿ ಆ ಶಿವಶರಣನ ಪಾದದ ಉಂಗುಟದ ಮೊನೆಯನ್ನು ಚುಚ್ಚಲು ಹಾಲಿನ ಒರತೆಯು ಓಲಗದ ನಡುವೆ ಹೊಳೆಯಾಗಿ ಹರಿಯಿತು. ಬಿಜ್ಜಳನು ಬೆರಗಾಗಿ ಭಯಪಡುತ್ತಿರಲು ಬಸವಣ್ಣನು ಅವನಿಗೆ ಬುದ್ಧಿ ಹೇಳಿ ಅಭಯವನ್ನು ಕೊಟ್ಟು ನಾಗಿದೇವನನ್ನು ತನ್ನ ಅರಮನೆಗೆ ಮೆರವಣಿಗೆ ಮಾಡಿಸಿಕೊಂಡು ಕರೆತಂದು ಪೂಜಿಸಿದನು. (ಈ ಮಧ್ಯೆ ಗಂಗಾದೇವಿಯು ಒಂದು ಗಂಡುಮಗುವನ್ನು ಪ್ರಸವಿಸಲು ಅದಕ್ಕೆ ಸಿದ್ಧರಸನೆಂದು ನಾಮಕರಣವಾಯಿತು.)

ಬಸವಣ್ಣನು ಮನೆಗೆ ಬಂದ ಜಂಗಮರನ್ನು ಸಂಗನೆಂದೇ ಭಾವಿಸಿ ಅವರ ಹೆಚ್ಚುಕುಂದುಗಳಿಗೆ ಗಮನ ಕೊಡದೆ ಅವರನ್ನು ಪೂಜಿಸುತ್ತಿದ್ದನು. ಒಮ್ಮೆ ಕಿನ್ನರ ಬೊಮ್ಮಯ್ಯನೆಂಬ ಮಾಹೇಶ್ವರನು ಬಸವಣ್ಣನನ್ನು ನೋಡಲು ಮಂಗಳವಾಡಕ್ಕೆ ಬಂದನು. ಅದನ್ನು ಕೇಳಿ ಬಸವಣ್ಣನೇ ಆತನನ್ನು ಎದುರುಗೊಂಡು ಉಪಚರಿಸಿ ತನ್ನ ಅರಮನೆಗೆ ಕರೆತಂದು ಪೂಜಿಸಿದನು. ಬಸವಣ್ಣನ ಲಿಂಗಭಕ್ತಿ ಜಂಗಮಾರಾಧನೆಗಳಿಗೆ ಮೆಚ್ಚಿದ ಬೊಮ್ಮಯ್ಯನು ಅಲ್ಲಿಯೇ ಕೆಲಕಾಲ ನಿಂತನು. ಬಸವಣ್ಣನಿಗೆ ಆತನಲ್ಲಿ ಗೌರವಾದರಗಳು ದಿನದಿನಕ್ಕೂ ಬೆಳೆಯುತ್ತಿದ್ದುವು. ಹೀಗಿರಲು ಒಂದು ದಿನ ಕಿನ್ನರಯ್ಯನು ತನಗೆ ಪ್ರಿಯವಾದ ಉಳ್ಳಿಯನ್ನು ತರಿಸಿ ಅಡಿಗೆಗಾಗಿ ಅದನ್ನು ಶೋಧಿಸುತ್ತಿರಲು ಈ ಸಂಗತಿಯನ್ನರಿಯದ ಬಸವಣ್ಣನು ಅದರ ಕಂಪನ್ನು ತಡೆಯಲಾರದೆ—ಈ ಅಭೋಜ್ಯವಸ್ತುವನ್ನು ಮನೆಗೆ ತಂದವನಾವನು ? ಎಂದು ಆಕ್ಷೇಪಿಸಿ ಎಂದಿನಂತೆ ಅರಮನೆಗೆ ಹೊರಟುಹೋದನು. ಈ ಮಾತನ್ನು ಕೇಳಿ ಕಿನ್ನರಯ್ಯನಿಗೆ ಬಹಳ ಅಸಮಾಧಾನವಾಗಲು ಮನೆಬಿಟ್ಟು ಹೊರಟುಹೋದನು. ಬಸವಣ್ಣನು ಮಧ್ಯಾಹ್ನ ಅರಮನೆಯಿಂದ ಮನೆಗೆ ಬಂದು ಕಿನ್ನರಯ್ಯನನ್ನು ಕಾಣದೆ ವಿಚಾರಿಸಲು ಆತನು ಮನೆ ಬಿಟ್ಟುಹೋದ ಸಂಗತಿ ತಿಳಿಯಿತು. ಆಗ ತಾನು ಮಾಡಿದುದು ತಪ್ಪೆಂದು ತಿಳಿದು "ಉಳ್ಳಿಯಿಂ ಕಿನ್ನರಯ್ಯಂಗಾದ ಮುಳಿಸುವಂ, ಉಳ್ಳಿಯಿಂದವೆ ತೀರ್ಚಿ ಕಳೆವುದು ನಿರೋಧವಂ" ಎಂದು ನಿರ್ಧರಿಸಿ ಕಿನ್ನರಯ್ಯನನ್ನು ಹುಡುಕಿಕೊಂಡು ಹೋಗಿ ಆತನನ್ನು ಸಮಾಧಾನಪಡಿಸಿ ಮನೆಗೆ ಕರೆತಂದು ಆತನ ಪ್ರೀತ್ಯರ್ಥವಾಗಿ ಉಳ್ಳಿಯ ಸಂತರ್ಪಣೆಯನ್ನು ಮಾಡಿದನು. ಅಂದಿನಿಂದ ಪ್ರತಿವರ್ಷವೂ ತಪ್ಪದೆ ಉಳ್ಳಿಯ ಹಬ್ಬವನ್ನು ಮಾಡುವುದಾಗಿ ನಿಶ್ಚಯಿಸಿದನು.

ಭಕ್ತಿಭಂಡಾರಿಯಾದ ಬಸವಣ್ಣನು ಹಾಡಿದ ವಚನಗಳು ದೇಶವಿದೇಶಗಳಲ್ಲಿ ಹರಡಿ ಆತನ ಕೀರ್ತಿಯನ್ನು ಹೆಚ್ಚಿಸಿದುವು. ಕಳಿಂಗದೇಶದ ಮಹದೇವಿ ಸೆಟ್ಟಿಯೆಂಬ ಮಾಹೇಶ್ವರನು ಒಂದುದಿನ ಬಸವರಾಜನ ಗೀತದಲ್ಲಿಯ "ಬೇಡಿ ಬೇಡಿದ ಶರಣಂಗೆ ನೀಡದಿರ್ದಡೆ ತಲೆದಂಡ ಕೂಡಲಸಂಗ ಅವಧಾರು" ಎಂಬ ಗೀತವನ್ನು ಕೇಳಿ ಆಶ್ಚರ್ಯಪಟ್ಟು, ಹತ್ತುಹೇರು ಮಾಣಿಕ, ಹತ್ತುಹೇರು ಮುತ್ತು, ಹತ್ತುಹೇರು ಹೊನ್ನುಗಳನ್ನು ಬೇಡಿ ಬಸವಣ್ಣನನ್ನು ಪರೀಕ್ಷಿಸಬೇಕೆಂದು ಮಂಗಳವಾಡಕ್ಕೆ ಹೊರಟನು. ಬಸವಣ್ಣನಿಂದ ಸತ್ಕೃತನಾಗಿ ಆತನ ಪಂಕ್ತಿಯಲ್ಲಿ ಪ್ರಸಾದವನ್ನು ಸ್ವೀಕರಿಸುತ್ತ—ಬಸವಣ್ಣ, "ಬೇಡಿದುದ ಶರಣರ್ಗಿಲ್ಲೆನ್ನದೀವೆ" ಎಂಬ ನಿನ್ನ ಗೀತದ ಬಿಂಕದ ಬಿರುದನ್ನು ಕೇಳಿ ನಿನ್ನನ್ನು ಯಾಚಿಸಲು ಬಂದೆನು

ಎಂದು ಹೇಳಿದನು. ಬಸವಣ್ಣನು ಬೇಕಾದುದನ್ನು ಕೇಳಿ ಎನ್ನಲು ಮಹದೇವಿ ಸೆಟ್ಟಿ ಮೂವತ್ತು ಎತ್ತಿನ ಹೇರು ತೊಗರಿ, ಜೋಳ, ಕಡಲೆಗಳನ್ನು ಕೊಡು ಎಂದು ಬೇಡಲು ಬಸವಣ್ಣನು ನಸುನಗುತ್ತಾ ನೀವು ಕಳಿಂಗದೇಶದಿಂದ ಹೊರಡುವಾಗ ಏನನ್ನು ಬೇಡ ಬಯಸಿದ್ದಿರೋ ಅದನ್ನೇ ಬೇಡಿ. "ಕುಡುವವಂ ಸಂಗಂ, ಬೇಡು ವವಂ ಸಂಗಮದೇವಂ, ಎನಗೊಂದುಂ ಭಾರವಿಲ್ಲ" ಎಂದು ಹೇಳಿ, ಬಸವಣ್ಣನು ಆತನ ಇಚ್ಛೆಯನ್ನು ಪೂರೈಸಿ ಕಳಿಂಗದೇಶಕ್ಕೆ ಕಳುಹಿಸಿದನು.

ಸಂಗಮೇಶ್ವರನು ಬಸವಣ್ಣನ ಮನಸ್ಸನ್ನು ಪರೀಕ್ಷಿಸಬೇಕೆಂದು ವಿಟವೇಷ ವನ್ನು ತಳೆದು "ದೇಸವಡೆದ ಹದಿನಾಱಱ ಹರಯದವ"ನಾಗಿ ಬಸವಣ್ಣನ ಮನೆಗೆ ಬಂದು ಆತನಿಂದ ಸತ್ಕೃತನಾಗಿ, ಮೃದುತಲ್ಪದ ಮೇಲೆ ಮಲಗಿ, ಕೆಳಗೆ ಕುಳಿತ ಬಸವನಿಂದ ಕಾಲನ್ನೊತ್ತಿಸಿಕೊಳ್ಳುತ್ತಾ "ಬಸವ, ನಾವು ಹೆಂಗೂಸಿಲ್ಲದೆ ಇರ್ದುದಿಲ್ಲ" ಎಂದು ಹೇಳಿದನು. ಆಗ ಬಸವಣ್ಣನು ಪಣ್ಯಾಂಗನೆಯರನ್ನು ಕರೆತರುವಂತೆ ಹೇಳಿ ಪರಿಚಾರಕರನ್ನು ಪುರದೊಳಕ್ಕೆ ಕಳುಹಿಸಿ ಗಣಿಕೆಯರೆಲ್ಲರೂ ದಂಪತಿಗಳಾಗಿರುವುದನ್ನು ಅವರಿಂದ ತಿಳಿದು "ಅಱಿದೆನಱಿದೆಂ, ತನ್ನ ಮಾಯು ವೆನ್ನಂ ಕೊಳುವುದೆ? ಸಿರಿ ಸರಸ್ವತಿಗಳಂ ಕೀಳ್ಮಾಡುವ ತನ್ನರಸಿ ಮಾಯಿ ದೇವಿಯರಂ ತಂದುಕೊಡುವೆಂ" ಎಂದು ಮಾಯಿದೇವಿಯರನ್ನು ಕರೆತಂದು ಶಯ್ಯಾಗೃಹಕ್ಕೆ ಕಳುಹಿಸಿ ಬಾಗಿಲಿಕ್ಕಲು ಬಸವಣ್ಣನ ದೃಢಭಕ್ತಿಗೆ ಮೆಚ್ಚಿದ ಶಿವನು ಆಕೆಗೆ ಪ್ರತ್ಯಕ್ಷನಾದನು. ಮಾಯಿದೇವಿಯರು ಅಲ್ಲಿದ್ದ ಜಂಗಮನು "ದಶಭುಜಂ ಪಂಚವದನ ತ್ರಿಣೇತ್ರನಾಗಿರೆ" ನೋಡಲಾರದೆ ನಡನಡ ನಡುಗಿ "ಬಸವ, ಜಂಗಮದೇವರು ಸಂಗಮದೇವರಾದರು" ಎನ್ನಲು ಬಸವಣ್ಣನು "ತಾಯೆ ತಾಯೆ, ಮುನ್ನ ವಾರೆಂದು ಕೊಟ್ಟೆನೆಂ"ದು ನುಡಿಯುವುದಕ್ಕೆ ಮೊದಲೇ ಸಂಗಮೇಶ್ವರನು ಬಸವನ ಚಿತ್ತವನ್ನು ಪರೀಕ್ಷಿಸಲಾರದೆ ಸೋತು ಬೇಗ ಅಂತರ್ಧಾನವಾದನು.

(ಹದಿಮೂರನೆಯ ಸ್ಥಳದ ಕಥೆ ಅತೃಪ್ತಿಕರವಾದ್ದರಿಂದ ಅದನ್ನು ಇಲ್ಲಿ ಸಂಗ್ರಹಿಸಿಲ್ಲ.)

## ಈ ರಗಳೆಯ ಕಥೆಗೂ ಇತರ ಕಥೆಗಳಿಗೂ ಇರುವ ವ್ಯತ್ಯಾಸ

ಬಸವರಾಜದೇವರ ರಗಳೆಯಲ್ಲಿ ಹೇಳಿರುವ ಕಥೆಗೂ ಈಗ ಪ್ರಚಾರದಲ್ಲಿರುವ ಮಿಕ್ಕ ಪುರಾಣಗಳ ಕಥೆಗೂ ಇರುವ ಬಹುಮುಖ್ಯವಾದ ಕೆಲವು ವ್ಯತ್ಯಾಸಗಳನ್ನು ಇಲ್ಲಿ ಕೊಟ್ಟಿದೆ.

೧. ಇತರ ಪುರಾಣಗಳಲ್ಲಿ ಬಸವಣ್ಣನು ಈಶ್ವರನ ವಾಹನವಾದ ವೃಷಭನ ಅವತಾರವೆಂದು ಹೇಳಿದೆ; ಇಲ್ಲಿ ಆತನು ವೃಷಭಮುಖನೆಂಬ ಒಬ್ಬ ಪ್ರಮಥನೆಂದು ಹೇಳಿದೆ.

೨. ಬಸವಣ್ಣನಿಗೆ ಉಪನಯನವಾಗಬೇಕಾದ ಸಂದರ್ಭವು ಬಂದಾಗ ಆತನು ತಮ್ಮ ತಂದೆಯೊಡನೆ ವಾದಿಸಿ ಉಪನಯನಕ್ಕೆ ಒಪ್ಪದೆ ಹೊರಟುಹೋದ ನೆಂದು ಇತರ ಪುರಾಣಗಳಲ್ಲಿ ಹೇಳಿದೆ. ಈ ರಗಳೆಯಲ್ಲಾದರೋ ಬಸವಣ್ಣನ ತಾಯಿತಂದೆಗಳು ಬಾಲ್ಯದಲ್ಲಿಯೇ ಸತ್ತುಹೋಗಿದ್ದರೆಂದೂ (ಸ್ಥಲ ೨) ಬಸ ವಣ್ಣನು ಯೌವನವನ್ನು ಪಡೆದಮೇಲೆ ಶಿವಭಕ್ತಿಗೂ ಬ್ರಾಹ್ಮಣರ ಕರ್ಮಕ್ಕೂ ಹೊಂದಿಕೆಯಾಗುವುದಿಲ್ಲವೆಂದು ಬಗೆದು ಬ್ರಾಹ್ಮಣ್ಯವನ್ನು ನಿರಾಕರಿಸಿದನೆಂದೂ ಹೇಳಿದೆ.

೩. ಸಂಗಮೇಶ್ವರನು ಜಂಗಮರೂಪನಾಗಿ ಬಂದು ಬಸವಣ್ಣನಿಗೆ ದೀಕ್ಷೆ ಕೊಟ್ಟಂತೆ ಇತರ ಪುರಾಣಗಳಲ್ಲಿ ಹೇಳಿದೆ. ಈ ರಗಳೆಯಲ್ಲಿ ಈಶ್ವರನ ವಾಹನವಾದ ವೃಷಭನು ಗುರುವಾದನೆಂದು (ಸ್ಥಲ ೪) ಹೇಳಿದೆ. ಅಲ್ಲದೆ ಬಸವಣ್ಣನಿಗೆ ಲಿಂಗ ಧಾರಣೆಯಾದದ್ದು ಕಪ್ಪಡಿ ಸಂಗಮವನ್ನು ಬಿಟ್ಟು ಬಿಜ್ಜಳನ ರಾಜಧಾನಿಗೆ ಹೋಗುವ ಸಂದರ್ಭದಲ್ಲಿ ಎಂದು ಹೇಳಿದೆ.

೪. ಇತರ ಪುರಾಣಗಳಲ್ಲಿ ಬಸವಣ್ಣನು ತನ್ನ ಸೋದರಮಾವನಾದ ಬಲದೇವ ಮಂತ್ರಿಯ ಮಗಳನ್ನು ಮದುವೆಯಾದನೆಂದೂ, ಬಲದೇವನ ಮರಣಾನಂತರ ಆತನ ಅಧಿಕಾರವು ಬಸವಣ್ಣನಿಗೆ ದೊರೆಯಿತೆಂದೂ ಹೇಳಿದೆ. ಈ ರಗಳೆಯಲ್ಲಿ ಯಾದರೋ ಬಲದೇವನ ಹೆಸರೇ ಇಲ್ಲ. ಬಸವಣ್ಣನು ಮೊದಲು ಬಿಜ್ಜಳನ ಭಂಡಾರಿ ಯಾದ ಸಿದ್ಧದಂಡೇಶನಲ್ಲಿ ವರ್ಷಕ್ಕೆ ೧೦೧ ಹೊನ್ನಿನ ಜೀತವನ್ನು ಪಡೆದನೆಂದೂ ಸಿದ್ಧದಂಡಾಧೀಶನೊಡನೆ ಆತನ ಮನೆಯಲ್ಲಿಯೇ ಕೆಲಕಾಲವಿದ್ದನೆಂದೂ, ಆತನು ತನ್ನ ಆಡಳಿತವನ್ನೆಲ್ಲಾ ಬಸವಣ್ಣನಿಗೇ ಒಪ್ಪಿಸಿದ್ದನೆಂದೂ ಆತನ ಮರಣಾ ನಂತರ ಆತನ ಆಸ್ತಿಯೆಲ್ಲವನ್ನೂ ಅಧಿಕಾರವನ್ನೂ ಬಿಜ್ಜಳನು ಬಸವಣ್ಣನಿಗೆ ಕೊಟ್ಟನೆಂದೂ ಹೇಳಿದೆ (ಸ್ಥಲ ೫). ಈ ಅಧಿಕಾರ ಪ್ರಾಪ್ತಿಯಾದ ಕೆಲವು ದಿನಗಳಮೇಲೆ ಬಸವಣ್ಣನು ಗಂಗಾದೇವಿ ಮಾಯಿದೇವಿಯರನ್ನು ವಿವಾಹವಾದ ನೆಂದು ಹೇಳಿದೆ.

ಇವಲ್ಲದೆ ಇನ್ನೂ ಕೆಲವು ವ್ಯತ್ಯಾಸಗಳುಂಟು. ಅವು ಅಷ್ಟು ಮುಖ್ಯ ವಲ್ಲವೆಂದು ಭಾವಿಸಿ ಅವನ್ನು ಇಲ್ಲಿ ನಿರೂಪಿಸಿಲ್ಲ.

## ವಿಮರ್ಶೆ

ಈ ಬಸವರಾಜದೇವರ ರಗಳೆಯು ಅರ್ಧಭಾಗವು ರಗಳೆಯಲ್ಲಿಯೂ ಅರ್ಧ ಭಾಗವು ಗದ್ಯದಲ್ಲಿಯೂ ರಚಿತವಾಗಿದೆ. ಶಿವಶರಣರ ಚರಿತ್ರೆಗಳನ್ನು ಹರಿಹರನು ಹೆಚ್ಚಾಗಿ ಬರೆದಿರುವುದು ಬರಿಯ ರಗಳೆಯಲ್ಲಿ. ಬಲುದೊಡ್ಡವೆಂದು ತೋರಿದ ಕೆಲವು ಚರಿತ್ರೆಗಳಲ್ಲಿ ಮಾತ್ರ ಗದ್ಯವನ್ನು ವೈವಿಧ್ಯಕ್ಕಾಗಿ ಉಪಯೋಗಿಸಿ ಕೊಂಡಿರುವನು. ಹೀಗೆ ರಗಳೆಯಲ್ಲಿ ಕಾವ್ಯರಚನೆ ಮಾಡಿದ್ದರಿಂದ ಜನರು ಆತನನ್ನು "ರಗಳೆಯ ಕವಿ" ಎಂದು ಹಾಸ್ಯಮಾಡಿದರೆಂದೂ ಆದಕಾರಣ ಆತನು ಗಿರಿಜಾ ಕಲ್ಯಾಣವನ್ನು ಚಂಪೂರೂಪವಾಗಿ ರಚಿಸಿದನೆಂದೂ ಒಂದು ಐತಿಹ್ಯವಿದೆ. ಈ ಹೇಳಿಕೆಯ ಪ್ರಕಾರ, ಒಬ್ಬ ಕವಿ ರಗಳೆಯಲ್ಲಿ ಎಷ್ಟೇ ಚೆನ್ನಾಗಿ ಗ್ರಂಥ ರಚನೆ ಮಾಡಲಿ, ಅದೇನೂ ಗಣ್ಯವಾಗತಕ್ಕದ್ದಲ್ಲ; ಕವಿಗೆ ಗೌರವ ಬರಬೇಕಾದರೆ ಆತನು ಚಂಪೂಕಾವ್ಯವನ್ನು ರಚಿಸಬೇಕು ಎಂಬ ಭಾವವಿರುವಂತೆ ತೋರುತ್ತದೆ. ರಗಳೆಗಳನ್ನು ಬರೆದಮೇಲೆ 'ಗಿರಿಜಾ ಕಲ್ಯಾಣ'ವನ್ನು ಹರಿಹರನು ಬರೆದನೆಂಬ ಅಭಿಪ್ರಾಯವೂ ಜನರ ಹಾಸ್ಯಕ್ಕೆ ಭಯಪಟ್ಟು ಅವರನ್ನು ಮೆಚ್ಚಿಸುವುದಕ್ಕಾಗಿ ಚಂಪೂಕಾವ್ಯವನ್ನು ರಚಿಸಿದನೆಂಬ ಐತಿಹ್ಯವೂ ಸಂಶಯಾಸ್ಪದವಾದುವು. ರಗಳೆ ಗಳನ್ನು ಬರೆದುದಕ್ಕಾಗಿ ಹರಿಹರನು ತಲೆಬಗ್ಗಿಸಬೇಕಾದದ್ದೇನೂ ಇರಲಿಲ್ಲ. ಒಂದು ವೇಳೆ ಆತನು 'ಗಿರಿಜಾ ಕಲ್ಯಾಣ'ವನ್ನು ರಚಿಸದೆಯೇ ಹೋಗಿದ್ದರೂ ಆತನಿಗೆ ಕನ್ನಡಸಾಹಿತ್ಯದಲ್ಲಿ ದೊರೆತಿರುವ ಸ್ಥಾನಕ್ಕೆ ಏನೂ ಚ್ಯುತಿ ಬರುತ್ತಿರಲಿಲ್ಲ. ಸಾಹಿತ್ಯ ದೃಷ್ಟಿಯಿಂದ ಈ ರಗಳೆಗಳು ಅನೇಕ ಚಂಪೂಗ್ರಂಥಗಳಿಗಿಂತಲೂ ಹೆಚ್ಚು ಆದರ ಣೀಯವೂ ಗೌರವಾರ್ಹವೂ ಆಗಿವೆ. ಬಸವರಾಜದೇವರ ರಗಳೆಯನ್ನು ಓದು ವವರು ಇದನ್ನು ಮನಗಾಣಬಹುದು.

ಹರಿಹರನ ಕಾಲಕ್ಕೆ ಹಿಂದೆಯೇ ರಗಳೆಯ ಛಂದಸ್ಸು ಕನ್ನಡಸಾಹಿತ್ಯದಲ್ಲಿ ಪ್ರಚಾರದಲ್ಲಿತ್ತು. ಕವಿಗಳು ಚಂಪೂಕಾವ್ಯಗಳಲ್ಲಿ ಅದನ್ನು ವೈವಿಧ್ಯಕ್ಕಾಗಿ ಅಲ್ಲಲ್ಲಿ ಅಪೂರ್ವವಾಗಿ ಉಪಯೋಗಿಸುತ್ತಿದ್ದರು. ಆದರೆ ಯಾರೂ ರಗಳೆಯಲ್ಲಿಯೇ ಒಂದು ಸಮಗ್ರಗ್ರಂಥವನ್ನು ರಚಿಸಿದಂತೆ ತಿಳಿದುಬಂದಿಲ್ಲ. ಹರಿಹರನು ಶಿವಶರಣರ ಚರಿತ್ರೆಗಳನ್ನು ಬರೆಯಬೇಕಾಗಿತ್ತು. ಈ ಕಥಾಕಾವ್ಯಗಳನ್ನು ರಚಿಸುವುದಕ್ಕೆ ಆಗ ಕನ್ನಡಕವಿಗಳು ರೂಢಿಗೆ ತಂದಿದ್ದ ಕಂದವೃತ್ತಗಳು ಹೊಂದಿಕೆಯಾಗುವುದಿಲ್ಲ ವೆಂದು ಹರಿಹರನಿಗೆ ತೋರಿರಬೇಕು. ಕಥಾಕಾವ್ಯವಾದರೋ ನದಿಯ ಪ್ರವಾಹ ದಂತೆ ನಿರರ್ಗಳವಾಗಿ ಸಾಗಬೇಕಾದದ್ದು; ಕಂದವೃತ್ತಗಳು ಪರಿಮಿತವಾದ ಅಳತೆಯುಳ್ಳವು; ತುಂಡುತುಂಡಾದುವು. ಕವಿ ಹೇಳಬೇಕೆಂದಿರುವ ಅಭಿಪ್ರಾಯಕ್ಕೆ

ಇವು ಸುಸೂತ್ರವಾಗಿ ಹೊಂದಿಕೊಳ್ಳದ ಕಾರಣ ಅನೇಕವೇಳೆ ಕವಿಯೇ ಅವುಗಳ ಅಳತೆಗೆ ತಕ್ಕಂತೆ ತನ್ನ ಅಭಿಪ್ರಾಯುಗಳನ್ನು ಜೋಡಿಸಿಕೊಳ್ಳಬೇಕಾಗುತ್ತದೆ.[1] ಹರಿಹರನು ಬರೆಯಬೇಕೆಂದಿದ್ದ ಶಿವಶರಣರ ಚರಿತ್ರೆಗಳು ಅನೇಕವಾಗಿದ್ದುವು. ತಡೆಯಿಲ್ಲದೆ, ಸುಸೂತ್ರವಾಗಿ, ಬೇಗಬೇಗ ಕಥೆಯನ್ನು ಹೇಳಿಕೊಂಡು ಹೋಗ ಬಹುದಾದ ಛಂದಸ್ಸೊಂದು ಆತನಿಗೆ ಬೇಕಾಗಿತ್ತು. ಇದಕ್ಕಾಗಿ ಆತನು ಒಂದು ಹೊಸ ಪದ್ಯವನ್ನು ನಿರ್ಮಿಸಿಕೊಳ್ಳಲಿಲ್ಲ; ಕನ್ನಡಕವಿಗಳು ಕ್ವಚಿತ್ತಾಗಿ ಉಪ ಯೋಗಿಸುತ್ತಿದ್ದ ರಗಳೆಯನ್ನು ಉಪಯೋಗಿಸಿಕೊಂಡನು. ರಗಳೆಯಲ್ಲಿ ಪಾದ ಸಂಖ್ಯೆಯ ನಿಯುಮವಿಲ್ಲವಾದಕಾರಣ ಕಥೆ ತಡೆಯಿಲ್ಲದೆ ಎಷ್ಟುದೂರ ಬೇಕಾದರೂ ಹೋಗಬಹುದು. ಆದರೆ ರಗಳೆಯಲ್ಲಿ ಸಮಗ್ರಗ್ರಂಥವನ್ನು ರಚನೆಮಾಡುವ ಸಂಪ್ರ ದಾಯವಿರಲಿಲ್ಲ. ಹರಿಹರನು ಸಂಪ್ರದಾಯ ಶರಣನಲ್ಲ, ಎಂದರೆ ಸಂಪ್ರದಾಯಕ್ಕೆ ಭಯಪಟ್ಟು ತನ್ನ ಮನಸ್ಸಿಗೆ ಸರಿಯಲ್ಲವೆಂದು ತೋರಿದ್ದನ್ನು ಒಪ್ಪಿಕೊಳ್ಳುವು ದಾಗಲಿ ಸರಿಯೆಂದು ತೋರಿದ್ದನ್ನು ಬಿಡುವುದಾಗಲಿ ಹರಿಹರನ ಸ್ವಭಾವವಲ್ಲ. ಭಾಷೆಯ ವಿಷಯದಲ್ಲಿ ಹೇಗೆ ರಳಕುಳಕ್ಷಳಗಳ ಸಂಬಂಧದ ನಿಯಮವು ಅರ್ಥವಿಲ್ಲ ದ್ದೆಂದು ಘಂಟಾಘೋಷವಾಗಿ ಹೇಳಿ ಆ ನಿಯಮವನ್ನು ಧೈರ್ಯವಾಗಿ ಉಲ್ಲಂಘಿಸಿದನೋ ಛಂದಸ್ಸಿನ ವಿಷಯದಲ್ಲಿಯೂ ಹಾಗೆಯೇ ಕಥಾಕಾವ್ಯಕ್ಕೆ ಕಂದವೃತ್ತಗಳು ಅನುಗುಣವಲ್ಲವೆಂಬುದನ್ನೂ ರಗಳೆಯೇ ಅನುಗುಣವಾದದ್ದೆಂಬು ದನ್ನೂ ಕಂಡುಕೊಂಡು ಸಂಪ್ರದಾಯಕ್ಕೆ ಲಕ್ಷ್ಯಮಾಡದೆ ತನ್ನ ಕಾವ್ಯಗಳನ್ನು ರಗಳೆಯಲ್ಲಿಯೇ ರಚಿಸಿದನು.[2]

ಕಥೆ ಚಿಕ್ಕದಾಗಿದ್ದಾಗ ರಗಳೆ ಸರಿಹೋಗುತ್ತದೆ; ದೊಡ್ಡದಾದಾಗ ಸರಿ ಹೋಗುವುದಿಲ್ಲ. ಏಕೆಂದರೆ ಪಾದನಿಯಮವಿಲ್ಲದ್ದರಿಂದ ಅದು ಕಥಾಕಾವ್ಯಕ್ಕೆ ಅನುಗುಣವಾದ ಛಂದಸ್ಸಾದರೂ ಆದಿಯಲ್ಲಿಯೂ ಅಂತ್ಯದಲ್ಲಿಯೂ ಪ್ರಾಸಬದ್ಧ ವಾಗಿರುವುದರಿಂದ ಅದರ ಗತಿಯ ಸ್ವಾತಂತ್ರ್ಯಕ್ಕೆ ಒಂದು ತಡೆ ಇರುತ್ತದೆ. ಕಂದವೃತ್ತಗಳು ನಾಲ್ಕು ಪಾದಗಳುಳ್ಳ ಪದ್ಯಗಳಾದರೆ, ಇದು ಎರಡುಪಾದಗಳುಳ್ಳ

---

[1] ಇದನ್ನು ಚಂಪೂಲೇಖಕರ ಕಾವ್ಯಗಳಲ್ಲಿ ನೋಡಬಹುದು. ಅನೇಕ ವೇಳೆಗಳಲ್ಲಿ ಒಂದು ಭಾವ, ಅಭಿಪ್ರಾಯ ಅಥವಾ ವಾಕ್ಯವು ಒಂದು ಪದ್ಯದಲ್ಲಿ ಮುಗಿಯುವುದಿಲ್ಲ. ಅದನ್ನು ಮುಗಿಸುವುದಕ್ಕೆ ಗದ್ಯವನ್ನೋ ಬೇರೊಂದು ಪದ್ಯವನ್ನೋ ಬರೆಯಬೇಕಾಗುತ್ತದೆ. ಕೆಲವು ವೇಳೆ ಎರಡು ಮೂರನ್ನು ಸೇರಿಸಬೇಕಾಗಿಯೂ ಬರುತ್ತದೆ.

[2] ಹರಿಹರನ ಈ ಮೇಲ್ಪಂಕ್ತಿಯನ್ನು ಹೆಚ್ಚುಜನ ಕವಿಗಳು ಅನುಸರಿಸಿಲ್ಲ. ಷಟ್ಪದಿ ಪ್ರಚಾರಕ್ಕೆ ಬಂದದ್ದೇ ಇದಕ್ಕೆ ಕಾರಣವೆಂದು ತೋರುತ್ತದೆ.

ಪದ್ಯಗಳ ಸಮೂಹವಾಗಿ ಪರಿಣಮಿಸುತ್ತದೆ. ಆದ್ಯಂತಗಳಲ್ಲಿ ಪ್ರಾಸವುಳ್ಳ ಎರಡೆರಡು ಪಾದಗಳು ಪುನಃಪುನಃ ಬಹುಕಾಲ ಕಿವಿಗೆ ಬೀಳುತ್ತಾ ಹೋದರೆ ಪದ್ಯದ ಗತಿಯಲ್ಲಿ ವೈವಿಧ್ಯವಿಲ್ಲದೆ ಮನಸ್ಸಿಗೆ ಬೇಸರವಾಗುತ್ತದೆ. ಇದನ್ನು ಅರಿತು ಹರಿಹರನು ಕೆಲವು ಶಿವಶರಣರ ರಗಳೆಗಳಲ್ಲಿ ಗದ್ಯವನ್ನೂ ಉಪಯೋಗಿಸಿಕೊಂಡಂತೆ ತೋರುತ್ತದೆ. ಪ್ರಾಸದ ಬಂಧನವನ್ನು ತೆಗೆದುಹಾಕಿದರೆ ಈ ಛಂದಸ್ಸು ತನ್ನ ಕಾವ್ಯಕ್ಕೆ ಅನುಕೂಲವಾಗುತ್ತದೆಂಬುದನ್ನು ಹರಿಹರನು ಕಂಡುಕೊಳ್ಳಲಿಲ್ಲ. ಈಗಿನ ಕಾಲದ ಕೆಲವರು ಹೊಸ ಕವಿಗಳು ಮಾಡುವಂತೆ ಹರಿಹರನು ಪ್ರಾಸದ ಕಟ್ಟನ್ನೂ ಮುರಿದು ಹಾಕಿದ್ದರೆ ಆತನು ರಗಳೆಯ ಕಾವ್ಯಗಳಲ್ಲಿ ಗದ್ಯವನ್ನು ಸೇರಿಸಿಕೊಳ್ಳಬೇಕಾದ ಆವಶ್ಯಕತೆಯುಂಟಾಗುತ್ತಿರಲಿಲ್ಲವೆಂದು ತೋರುತ್ತದೆ. ಅದು ಏನೇ ಆಗಲಿ, ಹರಿಹರನು ಕಥಾಕಾವ್ಯರಚನೆಗೆ ಒಂದು ಹೊಸಮಾರ್ಗವು ಆವಶ್ಯಕವೆಂಬುದನ್ನು ಕಂಡುಹಿಡಿಯುವುದರಲ್ಲಿ ತೋರಿಸಿದ ಪ್ರಜ್ಞಾತಿಶಯವೂ ಅದನ್ನು ಅನುಸರಿಸುವುದರಲ್ಲಿ ತೋರಿದ ಆತ್ಮವಿಶ್ವಾಸಧೈರ್ಯಸಾಹಸಗಳೂ ಸ್ತುತ್ಯವಾದುವು.

ಹರಿಹರನು ರಗಳೆಯ ಜತೆಗೆ ಗದ್ಯವನ್ನೂ ಸೇರಿಸಿದನಷ್ಟೆ. ಹೀಗೆ ಗದ್ಯವನ್ನು ಪದ್ಯದೊಡನೆ ಸೇರಿಸುವುದು ಕನ್ನಡ ಸಾಹಿತ್ಯದಲ್ಲಿ ಹೊಸದೇನೂ ಆಗಿರಲಿಲ್ಲ. ಚಂಪೂಕಾವ್ಯಗಳಲ್ಲಿ ಉಪಯೋಗಿಸುತ್ತಿದ್ದರು. ಆದರೆ ಹರಿಹರನು ಗದ್ಯವನ್ನು ಚಂಪೂಕಾವ್ಯಲೇಖಕರಂತೆ ಉಪಯೋಗಿಸಿಲ್ಲ. ಚಂಪೂಕಾವ್ಯಗಳಲ್ಲಿ ಅದು ಸಾಮಾನ್ಯವಾಗಿ ಪದ್ಯಗಳ ಮಧ್ಯದಲ್ಲಿ ಅಲ್ಪಸ್ವಲ್ಪವಾಗಿ ಬರುತ್ತದೆ. ಹರಿಹರನು ಗದ್ಯವನ್ನು ಹಾಗೆ ಅಲ್ಲಿಷ್ಟು ಇಲ್ಲಿಷ್ಟು ಉಪಯೋಗಿಸದೆ ಒಂದು ಸಂಪೂರ್ಣ ಸ್ಥಲವನ್ನೇ ಅದರಲ್ಲಿ ರಚಿಸುತ್ತಾನೆ. ಗದ್ಯವು ಬರುವ ರಗಳೆಗಳಲ್ಲಿ ಒಂದು ಸ್ಥಲವು ರಗಳೆಯಲ್ಲಿಯೂ ಇನ್ನೊಂದು ಗದ್ಯದಲ್ಲಿಯೂ ಹೀಗೆ ಒಂದಾದಮೇಲೊಂದು ರಚಿತವಾಗಿರುತ್ತವೆ. ಇದರಿಂದ ಕಥಾಕಾವ್ಯರಚನೆಗೆ ಪದ್ಯಗಳಲ್ಲಿ ಹೇಗೆ ರಗಳೆ ಉಚಿತವಾದದ್ದೋ ಹಾಗೆಯೇ ಗದ್ಯವೂ ಉಚಿತವಾದದ್ದೆಂಬುದನ್ನು ಹರಿಹರನು ಕಂಡುಕೊಂಡಂತೆ ತೋರುತ್ತದೆ. ಹೀಗೆ ಹೇಳುವುದರಿಂದ ಹರಿಹರನಿಗೆ ಹಿಂದೆ ಯಾರೂ ಗದ್ಯದಲ್ಲಿ ಕಾವ್ಯರಚನೆ ಮಾಡಿರಲಿಲ್ಲವೆಂದು ಅರ್ಥವಲ್ಲ. ಬಹಳ ಹಿಂದಿನ ಕಾಲದಲ್ಲಿಯೇ ಎಂದರೆ ಒಂಭತ್ತನೆಯ ಶತಮಾನಕ್ಕೆ ಹಿಂದೆಯೇ "ಗದ್ಯಕಥಾ" ಎಂಬ ಹೆಸರುಳ್ಳ ಕೆಲವು ಗದ್ಯಗ್ರಂಥಗಳು ರಚಿತವಾಗಿದ್ದುವೆಂದು ಕವಿರಾಜಮಾರ್ಗದಿಂದ ತಿಳಿದುಬರುತ್ತದೆ. ಹತ್ತನೆಯ ಶತಮಾನದಿಂದೀಚೆಯ ಕವಿಗಳು ಯಾರೂ ಆ ಗ್ರಂಥಗಳನ್ನು ಬರೆದ ಕವಿಗಳ ಹೆಸರನ್ನೆತ್ತದಿರುವುದರಿಂದ ಹರಿಹರನಿಗೆ ಆ ಕಾವ್ಯಗಳ ಪರಿಚಯವಿದ್ದಂತೆ ತೋರುವುದಿಲ್ಲ. ಹರಿಹರನ ಕಾಲಕ್ಕೆ ಹಿಂದೆ

ಹುಟ್ಟಿ ಈಗ ದೊರೆಯುವ ಗದ್ಯಕಾವ್ಯಗಳು ವೊಡ್ಡಾರಾಧನೆ, ಚಾವುಂಡರಾಯ ಪುರಾಣ—ಇವರಡೇ. ಆ ಜೈನಗ್ರಂಥಗಳ ಪರಿಚಯವಾದರೂ ಹರಿಹರನಿಗೆ ಇತ್ತೆಂಬುದು ಸಂಶಯಾಸ್ಪದವಾದ ವಿಷಯ. ಆದಕಾರಣ ಗದ್ಯದ ಈ ಉಪಯೋಗ ವನ್ನು ಕಂಡುಕೊಂಡ ಗೌರವವೂ ಹರಿಹರನಿಗೆ ಸಲ್ಲಬೇಕೆಂದು ತೋರುತ್ತದೆ.

ಹರಿಹರನ ರಗಳೆಗಳಲ್ಲಿ ರಗಳೆಯೂ ಗದ್ಯವೂ ಜತೆಜತೆಗೆ ಬರುವುದರಿಂದ ಗದ್ಯವು ರಗಳೆಗೆ ಹೊಂದಿಕೆಯಾಗುವಂತೆ ಇರಬೇಕಾಗುತ್ತದೆ. ಆದಕಾರಣವೇ ಈ ಗದ್ಯದ ಶೈಲಿಯಲ್ಲಿ ಅನೇಕವೇಳೆ ರಗಳೆಯ ಧಾಟಿ ಅಥವಾ ಗತಿ ಇರುತ್ತದೆ. ಹರಿಹರನದು ಕೇವಲ ಶಾಸ್ತ್ರಬದ್ಧವಾದ ಕೃತಕವಾದ ಗ್ರಾಂಥಿಕ ಗದ್ಯವಲ್ಲ. ಆತನು ಆಗಾಗ ಜನರು ಆಡುವ ಭಾಷೆಯಲ್ಲಿ ಬಳಕೆಯಲ್ಲಿದ್ದ ಮಾತುಗಳನ್ನೂ ವಾಕ್ಯ ವಿನ್ಯಾಸಗಳನ್ನೂ ಪ್ರಯೋಗಿಸುವುದರಿಂದ ಈ ಗದ್ಯವು ಆಗಿನ ಕಾಲದ ಜನರು ಮಾತಾಡುತ್ತಿದ್ದ ಭಾಷೆಗೆ ಸಂಬಂಧಿಸಿದ್ದಾಗಿರುತ್ತದೆ. ಹರಿಹರನ ರಗಳೆಗಳಲ್ಲಿ ಗದ್ಯವು ಹೆಚ್ಚಾಗಿ ದೊರೆಯುವುದರಿಂದ ಆಗಿನ ಕಾಲದಲ್ಲಿ ಕನ್ನಡಭಾಷೆ ಹೇಗಿತ್ತೆಂಬುದನ್ನು ತಿಳಿದುಕೊಳ್ಳಲು ಈ ರಗಳೆಗಳು ಒಳ್ಳೆಯ ಸಾಧನವಾಗಿವೆ.

ಹರಿಹರನು ಗ್ರಂಥರಚನೆಮಾಡಿದ್ದು ಶಿವಶರಣರ ಪುಣ್ಯಚರಿತ್ರೆಯನ್ನು ಸಾಮಾನ್ಯಜನರಿಗೆ ತಿಳಿಸುವುದಕ್ಕಾಗಿ. ಆತನು ರಗಳೆಯ ಛಂದಸ್ಸನ್ನು ಆರಿಸಿ ಕೊಂಡದ್ದಕ್ಕೆ ಅದು ಸಾಮಾನ್ಯಜನರಿಗೆ ಪ್ರಿಯವಾದದ್ದೆಂಬುದೂ ಒಂದು ಕಾರಣ ವಾಗಿರಬಹುದು. ಭಾಷೆಯ ವಿಷಯದಲ್ಲಿಯೇ ಆಗಲಿ ವರ್ಣನೆ, ಅಲಂಕಾರ ಮೊದಲಾದುವುಗಳ ವಿಷಯದಲ್ಲಿಯೇ ಆಗಲಿ ಹರಿಹರನು ತನ್ನ ಪಾಂಡಿತ್ಯವನ್ನು ತೋರಿಸುವುದಕ್ಕೆ ಪ್ರಯತ್ನಪಟ್ಟಹಾಗೆ ಕಾಣುವುದಿಲ್ಲ. ಗ್ರಂಥವನ್ನು ಸಾಮಾನ್ಯ ವಾಗಿ ಹಳಗನ್ನಡದ ಶೈಲಿಯಲ್ಲಿ ಬರೆದರೂ ಆಗಿನ ಕಾಲದ ಜನರಲ್ಲಿ ಬಳಕೆಯಲ್ಲಿದ್ದ ಭಾಷೆಯನ್ನು ಮೇಲಿಂದ ಮೇಲೆ ಉಪಯೋಗಿಸುತ್ತಾನೆ. ಕೆಲವುವೇಳೆ ವ್ಯಾಕರ ಣದ ನಿಯಮವನ್ನು ಕೂಡ ಉಲ್ಲಂಘಿಸುತ್ತಾನೆ. ತನ್ನ ಪ್ರೌಢಿಯನ್ನು ಪಂಡಿತ ಪಾಠಕರಿಗೆ ಪ್ರದರ್ಶಿಸಬೇಕೆಂಬ ಉದ್ದೇಶದಿಂದ ವರ್ಣನೆಗಳನ್ನಾಗಲಿ ಅಲಂಕಾರ ಗಳನ್ನಾಗಲಿ ತಂದು ತುಂಬಲು ಪ್ರಯತ್ನಿಸುವುದಿಲ್ಲ. ಇದರಿಂದ ಹರಿಹರನು ಪಂಡಿತ ನಾಗಿರಲಿಲ್ಲವೆಂದು ನಮ್ಮ ಅಭಿಪ್ರಾಯವಲ್ಲ. ಆತನಲ್ಲಿ ಬೇಕಾದಷ್ಟು ಪಾಂಡಿತ್ಯ ವಿತ್ತು; ಆತನ ಕಾವ್ಯಗಳಲ್ಲಿ ಎಷ್ಟೋ ಕಡೆ ಈ ಪಾಂಡಿತ್ಯದ ನಿದರ್ಶನಗಳು ದೊರೆಯುತ್ತವೆ. ಆದರೆ ತನ್ನ ಪಾಂಡಿತ್ಯ ಪ್ರದರ್ಶನಕ್ಕಾಗಿ ಬುದ್ಧಿಪೂರ್ವಕ ವಾಗಿ ಹರಿಹರನು ಇಂಥ ಪ್ರಯೋಗಗಳನ್ನು ತಂದಿರುವಂತೆ ತೋರುವುದಿಲ್ಲ. ಅಪ್ರಯತ್ನವಾಗಿ ಅಜ್ಞಾತವಾಗಿ ಅವು ಅದರಲ್ಲಿ ಸೇರಿಕೊಂಡಂತೆ ಕಾಣುತ್ತದೆ.

ಕಥಾಕಾವ್ಯದಲ್ಲಿ ವರ್ಣನೆಗೆ ಯಾವ ಸ್ಥಳವು ದೊರೆಯಬೇಕೆಂಬುದನ್ನು ಹರಿಹರನು ಅರಿತಿದ್ದನು. ಹದಿನೆಂಟು ವರ್ಣನೆಗಳಲ್ಲಿ ಒಂದು ಇಲ್ಲದಿದ್ದರೂ ತಮ್ಮ ಕಾವ್ಯವು ಮಹಾಕಾವ್ಯವಾಗುವುದಿಲ್ಲವಲ್ಲಾ ಎಂದು, ತಾವು ಬರೆಯುವ ಕಥೆಗೆ ಬೇಕಿಲ್ಲದಿದ್ದರೂ ಈ ಎಲ್ಲಾ ವರ್ಣನೆಗಳನ್ನು ತಂದು ಅಡಕಿ ಎಳೆಯ ಮಗುವಿನ ತಲೆಯಮೇಲೆ ಒಂದು ದೊಡ್ಡ ಗುಂಡನ್ನು ಹೇರಿದಂತೆ ಸಣ್ಣ ಕಥೆಗೆ ದೊಡ್ಡದೊಡ್ಡ ವರ್ಣನೆಗಳನ್ನು ಅನಾವಶ್ಯಕವಾಗಿ ತಂದು ತಗುಲಿಸುವ ಕವಿಗಳೂ ಕನ್ನಡದಲ್ಲುಂಟು. ಹರಿಹರನು ಹೀಗೆ ಮಾಡಿಲ್ಲ. ಆತನು ಅನೇಕ ಶಿವಶರಣರ ಚರಿತ್ರೆಗಳನ್ನು ಬರೆಯ ಬೇಕಾಗಿ ಇದ್ದದ್ದರಿಂದ ತನ್ನ ಪಾಂಡಿತ್ಯವನ್ನೆಲ್ಲ, ಚಾತುರ್ಯವನ್ನೆಲ್ಲ ಒಂದೇ ಕಥೆ ಯಲ್ಲಿ ಮುಗಿಸಬೇಕಾದ ಆವಶ್ಯಕತೆಯೂ ಇರಲಿಲ್ಲ; ಹರಿಹರನಿಗೆ ಹಾಗೆ ಮಾಡ ಬೇಕೆಂಬ ಉದ್ದೇಶವೂ ಇರಲಿಲ್ಲ. ಯಾವ ಕಥೆಯಲ್ಲಿ ಯಾವ ಸಂದರ್ಭದಲ್ಲಿ ಯಾವ ವರ್ಣನೆ ಎಷ್ಟು ಆವಶ್ಯಕವೋ ಅಷ್ಟನ್ನು ಮಾತ್ರ ತರುತ್ತಾನೆ. ಇದಕ್ಕೆ ಒಂದೆರಡು ಉದಾಹರಣೆಗಳನ್ನು ಬಸವರಾಜದೇವರ ರಗಳೆಯಿಂದ ಕೊಡಬಹುದು. ಈ ಕಥೆ ಆರಂಭವಾಗುವುದು ಕೈಲಾಸದಲ್ಲಿ; ಈ ರಗಳೆಯಲ್ಲಿ ಕೈಲಾಸ ಪರ್ವತದ ವರ್ಣನೆಯಿಲ್ಲ. ಬಸವಣ್ಣನು ಹುಟ್ಟಿದ್ದು ಬಾಗೆವಾಡಿಯಲ್ಲಿ. ಈ ಸಂದರ್ಭದಲ್ಲಿ ಕೆಲವು ಕನ್ನಡ ಕವಿಗಳು ಬಹುಶಃ ಸಮುದ್ರ ವರ್ಣನೆಯಿಂದ ಆರಂಭಿಸಿ ಪಟ್ಟಣದ ವರ್ಣನೆಯವರೆಗೂ ಬೇಕಾದಷ್ಟು ವರ್ಣನೆಗಳನ್ನು ಸೇರಿಸಬಹುದು. ಆದರೆ ಇಲ್ಲಿ ಬಾಗೆವಾಡಿಯ ವರ್ಣನೆ ನಾಲ್ಕು ಪಾದಗಳಲ್ಲಿ ಮುಗಿದುಹೋಗಿದೆ. ಬಸವಣ್ಣ ನವರ ವಿವಾಹದ ವಿಷಯವು ಕಥೆಯಲ್ಲಿ ಬಂದಿದೆ. ಗಿರಿಜಾಕಲ್ಯಾಣವನ್ನು ಬರೆದ ಕವಿಗೆ ಬಸವಣ್ಣನ ವಿವಾಹವನ್ನು ವರ್ಣಿಸುವುದು ಕಷ್ಟವಾಗಿರಲಿಲ್ಲ. ಇಲ್ಲಿ ಆ ವರ್ಣನೆಯ ಗಂಧವೇ ಇಲ್ಲ. ಬಸವಣ್ಣನ ಧಾರ್ಮಿಕಜೀವನವನ್ನು ಚಿತ್ರಿಸುವ ಕಥೆಗೆ ಇಂಥ ವರ್ಣನೆಗಳು ಅನಾವಶ್ಯಕವೆಂದು ತಿಳಿದು ಹರಿಹರನು ಕೈಬಿಟ್ಟಂತೆ ತೋರುತ್ತದೆ. ವರ್ಣಿಸಬೇಕೆಂದು ಉದ್ದೇಶಿಸಿದ ಸಂಗತಿಗಳನ್ನು ಬಹು ವಿಸ್ತಾರ ವಾಗಿಯೂ ಉಜ್ವಲವಾಗಿಯೂ ಓದುವವರ ಮನಸ್ಸಿಗೆ ಹಿಡಿಯುವಂತೆ ವರ್ಣಿ ಸಿರುತ್ತಾನೆ. ಉದಾಹರಣೆಗೆ, ಬಸವಣ್ಣನು ಸಂಗಮೇಶ್ವರನನ್ನು ಪೂಜೆಮಾಡಿದ ವಿಷಯವನ್ನು ವರ್ಣಿಸುವುದಕ್ಕೆ ಒಂದು ಸ್ಥಲವನ್ನೇ ಸಂಪೂರ್ಣವಾಗಿ ಉಪ ಯೋಗಿಸಿದ್ದಾನೆ. ಈ ವರ್ಣನೆಯು ಎಷ್ಟು ಉಜ್ವಲವಾಗಿರುವುದೆಂದರೆ ನಾಸ್ತಿಕನ ಹೃದಯದಲ್ಲಿ ಕೂಡ ಭಕ್ತಿಭಾವವನ್ನು ಉದ್ರೇಕಿಸುವಂತಿದೆ. ಹಾಗೆಯೇ ಬಸವಣ್ಣನು ಮಾಡುತ್ತಿದ್ದ ಗಣಾರಾಧನೆಯನ್ನು ಬಹಳ ವಿಸ್ತಾರವಾಗಿ ನಿರೂಪಿಸಿದ್ದಾನೆ. ಅಷ್ಟೇಕೆ, ಸಂದರ್ಭವೊದಗಿದಾಗ (೧೧ ನೆಯ ಸ್ಥಲ) ಉಳ್ಳಿಯ ಮೆರವಣಿಗೆಯನ್ನು ಕೂಡ ವಿಜೃಂಭಣೆಯಿಂದ ವರ್ಣಿಸಿದ್ದಾನೆ.

ಕಥೆಯ ವಿಷಯದಲ್ಲಿಯೂ ಹೀಗೆಯೇ. ತಾನು ಚಿತ್ರಿಸಬೇಕೆಂದು ಹೊರಟಿರುವ ಕಥಾನಾಯಕನ ಜೀವನದ ಸಂಗತಿಗಳಲ್ಲಿ ತನ್ನ ಉದ್ದೇಶಕ್ಕೆ ಆವಶ್ಯಕವಾದಷ್ಟನ್ನು ಮಾತ್ರ ಆರಿಸಿಕೊಂಡು ಮಿಕ್ಕುವನ್ನು ಅಲಕ್ಷಿಸುತ್ತಾನೆ. ಬಸವರಾಜದೇವರ ರಗಳೆಯಲ್ಲಿ ಹರಿಹರನು ಚಿತ್ರಿಸಬೇಕೆಂದು ಉದ್ದೇಶಿಸಿರುವುದು ಬಸವಣ್ಣನ ಅಲೌಕಿಕವಾದ ಧಾರ್ಮಿಕ ಜೀವನವನ್ನು. ಆ ಜೀವನದ ಸಾರಾಂಶವನ್ನು ಈ ರಗಳೆಯಲ್ಲಿ ಒಂದು ಕಡೆ ಶಿವಶರಣರ ಬಾಯಿಂದ ಹೀಗೆ ಹೇಳಿಸಿರುತ್ತಾನೆ—

"ಎಲೆ ಬಸವ . . . . ನಿನ್ನ ನೇಮವಿದಾರ್ಗುಂಟು! ಗುರುಲಿಂಗದೊಳಿರದಿಲ್ಲದಿಪ್ಪೆ. ಶರಣರಂ ಸಂಗನೆಂದೆ ಕಾಣ್ಬೆ. ಬಂದ ಭಕ್ತರನತ್ಯಾದರಿಪೆ. ಬಪ್ಪ ಭಕ್ತರಂ ಹರುಷದೊಳಿದಿರ್ಗೊಂಬೆ. ಬೇಡಿದುದ ಶರಣರ್ಗಿಲ್ಲೆನ್ನದೀವೆ. ಬೇಡಲೊಲ್ಲದವರ್ಗೆ ಮಿಗಿಲಾಗಿ ಆರಾಧಿಪೆ. ಜಾಗ್ರತ್ಸ್ವಪ್ನಸುಷುಪ್ತಿಯವಸ್ಥಾತ್ರಯಂಗಳೊಳು ಶರಣರಂ ಸಂಗನೆಂದಲ್ಲದೆ ಕಾಣೆ. ನಿಚ್ಚ ಶಿವರಾತ್ರಿಯನಚ್ಚರಿಯಿಂ ಮಾಳ್ಪೆ. ಜಂಗಮ ಪ್ರಾಣಿಯಾಗಿಪ್ಪೆ. ಶಿವಲಿಂಗಾರ್ಪಿತವಲ್ಲದುದನಾಘ್ರಾಣಿಸೆ, ನೋಡೆ, ನುಡಿಯೆ, ಮುಟ್ಟೆ, ಕೇಳೆ. ಶಿವಸಮಯವನುದ್ಧರಿಸುವೆ. ಪರಸಮಯವಂ ಸಂಹರಿಸುವೆ. ಲಿಂಗದಲ್ಲಿ ಕಠಿನಮಂ ಕೇಳೆ. ಜಂಗಮದಲ್ಲಿ ಜಾತಿಯನರಿಸೆ. ಪ್ರಸಾದದಲ್ಲಿ ಅಪವಿತ್ರತೆಯನರಿಯೆ . . . . ಪಾಷಂಡಿಭೂಮಿಯೊಳು ಶಿವಭಕ್ತಿಯನಾರಂಭಿಸಿ ಸಾಮರ್ಥ್ಯಮಂ ಬಿತ್ತಿ ಪ್ರತ್ಯಕ್ಷಂಗಳಂ ಬೆಳೆದು ಗಣಪರ್ವಂಗಳಂ ಸಫಲಂ ಮಾಡಲೆಂದು ಬಂದ ಕಾರಣಿಕ ಬಸವ, ನಿನ್ನ ದೆಸೆಯಿಂದೆಮ್ಮ ಭಕ್ತಿ ಬಣ್ಣಾವೇರಿತು . . . ." (ಸ್ಥಲ ೮: ೩೭–೫೯).

ಈ ಅಂಶವನ್ನೇ ಹರಿಹರನು ಈ ರಗಳೆಯಲ್ಲಿ ವಿಶದೀಕರಿಸಿದ್ದಾನೆ. ಇದಕ್ಕೆ ಬೇಕಾದಷ್ಟು ಸಂಗತಿಗಳನ್ನೇ ಬಸವಣ್ಣನ ಜೀವನದಿಂದ ಆತನು ಆರಿಸಿಕೊಂಡಂತೆ ತೋರುತ್ತದೆ. ಇಷ್ಟೇ ಸಂಗತಿಗಳು ಮಾತ್ರ ಹರಿಹರನಿಗೆ ಗೊತ್ತಿದ್ದುವೋ ಅಥವಾ ಹೆಚ್ಚಾದ ಸಂಗತಿಗಳು ತಿಳಿದಿದ್ದರೂ ತನ್ನ ಉದ್ದೇಶಕ್ಕೆ ಅವು ಬಾಹ್ಯವಾದುವೆಂದು ಅವುಗಳನ್ನು ಕೈಬಿಟ್ಟನೋ ತಿಳಿಯದು. ಅಂತೂ ಬಸವಣ್ಣನ ಅಲೌಕಿಕವಾದ ಧಾರ್ಮಿಕ ಜೀವನಕ್ಕೆ ಸಂಬಂಧಪಡದ ಸಂಗತಿಗಳು ಬೇರೆಯ ದೃಷ್ಟಿಯಿಂದ ಎಷ್ಟೇ ಮುಖ್ಯವಾಗಿದ್ದರೂ ಈ ಗ್ರಂಥದಲ್ಲಿ ಉಕ್ತವಾಗಿಲ್ಲ. ಉದಾಹರಣೆಗೆ, ಬಸವಣ್ಣನ ತಂದೆತಾಯಿಗಳು ಶಿವಭಕ್ತರಾಗಿದ್ದರೆಂಬುದು ಹೊರತು ಆತನ ವಿಷಯವಾಗಿ ಮತ್ತೇನು ಈ ಗ್ರಂಥದಿಂದ ಗೊತ್ತಾಗುತ್ತದೆ? ಬಸವಣ್ಣನು ಬಾಲ್ಯದಲ್ಲಿ ತಂದೆತಾಯಿಗಳನ್ನು ಕಳೆದುಕೊಂಡು ಮುತ್ತಜ್ಜಿಯ ಪೋಷಣೆಯಲ್ಲಿದ್ದನೆಂದೂ "ಕರ್ಮಲತೆಯಂತಿರ್ದ ಜನ್ನಿವಾರಮಂ ಕಳೆದು ಬಿಸುಟು" ವೀರ ಶಿವಭಕ್ತಿ

ಯನ್ನು ಕೈಕೊಂಡನೆಂದೂ ಹೇಳಿದೆ. ಈ ಮಧ್ಯದಲ್ಲಿ ನಡೆದ ಸಂಗತಿಗಳು ಯಾವುವು? "ಶಿವಭಕ್ತಿ ಮುತ್ತಂತಿರ್ದ" ಆ ಮುತ್ತಬ್ಬೆಯ ಗತಿಯೇನಾಯಿತು? ಬಸವಣ್ಣನು ಮಂಗಳವಾಡಕ್ಕೆ ಹೋಗಿ ಬಿಜ್ಜಳನ ಭಂಡಾರದಲ್ಲಿ ಒಂದು ನೌಕರಿಗೆ ಸೇರಿ ಸಿದ್ಧದಂಡೇಶನ ಮನೆಯಲ್ಲಿ ವಾಸಮಾಡುತ್ತಿದ್ದನೆಂದು ಹೇಳಿದೆ. ಆಮೇಲೆ ಸಿದ್ಧದಂಡೇಶನು ಸಾಯುವವರೆಗೂ ಯಾವ ಸಂಗತಿಗಳೂ ಜರುಗಲಿಲ್ಲವೆ? ಬಸವಣ್ಣನು ಬಿಜ್ಜಳನ ಆಸ್ಥಾನದಲ್ಲಿ ಉನ್ನತಪದವಿಯನ್ನು ಪಡೆದನಷ್ಟೆ. ಅವರಿಬ್ಬರಿಗೂ ರಾಜಕೀಯವಾದ ಯಾವ ವ್ಯವಹಾರಗಳು ನಡೆಯುತ್ತಿದ್ದುವು; ಬಸವಣ್ಣನು ರಾಜ್ಯದ ಆಡಳಿತದಲ್ಲಿ ನಿರ್ವಹಿಸುತ್ತಿದ್ದ ಕೆಲಸದ ವಿವರವೇನು? ಬಸವಣ್ಣನು ಉನ್ನತ ಪದವಿಗೆ ಬಂದಮೇಲೆ ಗಂಗಾದೇವಿ ಮಾಯಿದೇವಿಯರನ್ನು ಮದುವೆಯಾದರೆಂದು ಹೇಳಿದೆ. ಈ ಗಂಗಾದೇವಿ ಮಾಯಿದೇವಿಯರು ಯಾರು? ಬಸವಣ್ಣನು ಇಬ್ಬರನ್ನೂ ಒಟ್ಟಿಗೇ ಮದುವೆಯಾದನೆ, ಬೇರೆಬೇರೆ ಕಾಲಗಳಲ್ಲಿ ಮದುವೆಯಾದನೆ? ಇವೇ ಮೊದಲಾದ ಯಾವ ಪ್ರಶ್ನೆಗಳಿಗೂ ಈ ರಗಳೆಯಲ್ಲಿ ಉತ್ತರವು ದೊರೆಯುವಂತಿಲ್ಲ. ಬಸವಣ್ಣನ ಧಾರ್ಮಿಕಜೀವನದ ನಿರೂಪಣಕ್ಕೆ ಈ ಸಂಗತಿಗಳು ಆವಶ್ಯಕವಲ್ಲವೆಂದೇ ಇವನ್ನು ಹೀಗೆ ಹರಿಹರನು ಉಪೇಕ್ಷಿಸಿರುವನೆಂದು ತೋರುತ್ತದೆ. ಆತನಿಗೆ ಮುಖ್ಯವಾಗಿ ಬೇಕಾಗಿದ್ದ ವಿಷಯಗಳು ಬಸವಣ್ಣನ ಗುರುಲಿಂಗಜಂಗಮಾರಾಧನೆ ಮತ್ತು "ಪ್ರತ್ಯಕ್ಷ" (ಪವಾಡ, ಮಾಹಾತ್ಮ್ಯ)ಗಳು. ಧಾರ್ಮಿಕ ಮಹಾಪುರುಷರ ಜೀವನದಲ್ಲಿ ಅದ್ಭುತಕಾರ್ಯಗಳು ನಡೆಯುವುದೇ ಆ ಜೀವನದ ಒಂದು ಮುಖ್ಯಲಕ್ಷಣವೆಂದು ಭಾವಿಸುವುದು ನಮ್ಮ ಜನಗಳ ಸಂಪ್ರದಾಯವಾಗಿರುವುದರಿಂದ ಹರಿಹರನು ಈ ದೃಷ್ಟಿಯಿಂದಲೇ ಬಸವಣ್ಣನ ಜೀವನವನ್ನು ನೋಡಿರಬೇಕು. ಆ ಜೀವನದಲ್ಲಿ ಯಾವ ಸಂಗತಿ ಮುಖ್ಯ, ಯಾವುದು ಅಮುಖ್ಯ—ಎಂಬುದನ್ನು ನಿರ್ಣಯಿಸುವುದಕ್ಕೆ ಇದೇ ಆತನಿಗೆ ಒರೆಗಲ್ಲಾಗಿರಬೇಕು. ಹರಿಹರನು ಕಥೆಯನ್ನು ಹೇಗೆ ಬೆಳಸಿರುವನೆಂಬುದನ್ನು ಈ ದೃಷ್ಟಿಯಿಂದ ಪರೀಕ್ಷಣ ಮಾಡಿದರೆ ಈ ರಗಳೆಯಲ್ಲಿ ಬಂದಿರುವ ಸಂಗತಿಗಳ ಔಚಿತ್ಯವು ಸ್ಪಷ್ಟವಾಗುತ್ತದೆ.[1]

ಈ ಕಥೆಯಲ್ಲಿ ಬಸವಣ್ಣನ ಜೀವನವು ವಿಕಾಸಗೊಳ್ಳುವ ರೀತಿ ಸಹಜವೂ ಸ್ಫುಟವೂ ಆಗಿದೆ. ಬಸವಣ್ಣನಿಗೆ ಪ್ರಾಯವು ಬಂದಾಗ ಆತನಿಗೆ ಸಾಂಪ್ರ

---

[1] ಈಗ ದೊರೆತಿರುವುದು ಈ ರಗಳೆಯ ಅರ್ಧಭಾಗವಷ್ಟೆ; ಇದರಲ್ಲಿ ಬಸವಣ್ಣನ ಪವಾಡಗಳು ಕೆಲವು ವರ್ಣಿತವಾಗಿವೆ. ಮಿಕ್ಕ ಅರ್ಧಭಾಗದಲ್ಲಿ ಇನ್ನೂ ಅನೇಕ ಪವಾಡಗಳು ವರ್ಣಿತವಾಗಿರಬೇಕು.

ದಾಯಿಕಮತದಲ್ಲಿ ಅನಾದರಣೆ ಹುಟ್ಟಿ ಹೊಸ ಧಾರ್ಮಿಕ ಭಾವನೆಯುಂಟಾಗುವುದು; ಆತನು ಸ್ವಜನವನ್ನೂ ಸ್ವಗ್ರಾಮವನ್ನೂ ಪರಿತ್ಯಾಗಮಾಡಿ ಒಂದು ಪುಣ್ಯಕ್ಷೇತ್ರವನ್ನು ಸೇರುವುದು; ಅಲ್ಲಿ ಕೆಲವುಕಾಲ ಶಿವಪೂಜೆಯಲ್ಲಿ ನಿರತನಾಗಿದ್ದು ಈಶ್ವರಪ್ರೇರಿತನಾಗಿ ಬಿಜ್ಜಳನ ರಾಜಧಾನಿಗೆ ಹೋಗುವುದು; ಅಲ್ಲಿ ಅನುಕೂಲಸಂದರ್ಭವೊದಗಿ ಆತನಿಗೆ ನೌಕರಿಯೂ ಸ್ವಜನವಾದ ಸಿದ್ಧ ದಂಡಾಧಿಪನ ಆಶ್ರಯವೂ ದೊರೆಯುವುದು; ಕಾಲಕ್ರಮದಲ್ಲಿ ತಮ್ಮ ಸ್ವ ಚಾಣ್ಮೆಯಿಂದ ಈತನು ಬಿಜ್ಜಳನ ಮೆಚ್ಚಿಗೆಯನ್ನು ಪಡೆದು ಉನ್ನತ ಪದವಿಗೇರುವುದು; ಈತನು ಹೀಗೆ ಉನ್ನತ ಪದವಿಗೆ ಬಂದಾಗ ಈತನ ಪಂಥದ ಜನರು ಪ್ರಾಬಲ್ಯವನ್ನು ಹೊಂದುವುದು; ಇದರಿಂದ ಹಳೆಯ ಸಂಪ್ರದಾಯದವರಿಗೂ ಬಸವಣ್ಣನ ಪಂಥದವರಿಗೂ ದ್ವೇಷಾಸೂಯೆಗಳು ಬೆಳೆಯುವುದು; ಇದರ ಫಲವಾಗಿ ಬಸವಣ್ಣನಿಗೂ ಬಿಜ್ಜಳನಿಗೂ ವೈಮನಸ್ಯಕ್ಕೆ ಕಾರಣಗಳು ಒದಗುವುದು—ಇವೆಲ್ಲವೂ ಸ್ವಾಭಾವಿಕವಾಗಿ ನಡೆಯಬಹುದಾದುವು. ಬಸವಣ್ಣನಿಗೆ ಸಂಬಂಧಪಟ್ಟ ಅನೇಕ ಸಂಗತಿಗಳನ್ನು ನಿರೂಪಿಸುವ ಕ್ರಮದಲ್ಲೇ ಹರಿಹರನು ಆತನ ಜೀವನದ ಈ ಮೂಲರೇಖೆಗಳು ಸುಸ್ಪಷ್ಟವಾಗುವಂತೆ ಕಾವ್ಯರಚನೆಮಾಡಿದ್ದಾನೆ. ತನ್ನ ನೈಪುಣ್ಯದಿಂದ ಬಸವಣ್ಣನ ವ್ಯಕ್ತಿಚಿತ್ರಕ್ಕೆ ಜೀವಕಳೆಯನ್ನು ಕೊಟ್ಟಿದ್ದಾನೆ. ಬಸವಣ್ಣನ ಅಲೌಕಿಕ ಕಾರ್ಯಗಳನ್ನೂ ಅದ್ಭುತಗಳನ್ನೂ ಮಹಿಮೆಗಳನ್ನೂ ಹರಿಹರನು ಮೇಲಿಂದ ಮೇಲೆ ಉದ್ಘೋಷಿಸಿದ್ದರೂ ಆತನ ಸರಳವಾದ ಮಾನವ ಹೃದಯವನ್ನು ಮಾತ್ರ ಎಲ್ಲಿಯೂ ಮರೆಮಾಡಿಲ್ಲ.

ಇನ್ನೆರಡು ಮಾತುಗಳನ್ನು ಹೇಳಿ ಈ ವಿಮರ್ಶೆಯನ್ನು ಮುಗಿಸಬಹುದು. ಈ ಕಾವ್ಯದಲ್ಲಿ ಶಬ್ದಾಲಂಕಾರಗಳೂ ಅರ್ಥಾಲಂಕಾರಗಳೂ ಹಲವು ಕಡೆ ಬರುತ್ತವೆ. ಆದರೆ ಈ ಅಲಂಕಾರಗಳನ್ನು ಹರಿಹರನು ಪ್ರಯತ್ನಪಟ್ಟು ತರುವುದಿಲ್ಲ. ಅವು ತಾವಾಗಿಯೇ ಸಹಜವಾಗಿ ಸಂದರ್ಭಕ್ಕನುಗುಣವಾಗಿ ರೂಪುಗೊಳ್ಳುತ್ತವೆ. ಇವನಿಗೆ ಕ್ಲಿಷ್ಟವಾದ ಪಂಡಿತಪ್ರಿಯವಾದ ಪ್ರಚುರವಾದ ಅಲಂಕಾರಗಳಲ್ಲಿ ಆಸಕ್ತಿ ಕಡಮೆ. ಈ ಗ್ರಂಥದಲ್ಲಿ ಹೆಚ್ಚಾಗಿ ಬರತಕ್ಕವು ರೂಪಕ, ಉಪಮೆ, ಉತ್ಪ್ರೇಕ್ಷೆ ಮೊದಲಾದ ಬಳಕೆಯಲ್ಲಿರುವ ಹಿತಕರವಾದ ಅಲಂಕಾರಗಳು. ರೂಪಕವನ್ನಂತೂ ಕೆಲವು ಕಡೆಗಳಲ್ಲಿ ಬಹಳ ಮನೋಜ್ಞವಾಗಿ ತಂದಿದ್ದಾನೆ. ಈತನು ನಿರೂಪಿಸುವ ವಿಷಯವು ಮತಧರ್ಮಗಳಿಗೆ ಸಂಬಂಧಪಟ್ಟಿದ್ದರೂ ಈತನು ನೀರಸವಾದ ತತ್ತ್ವವಿಚಾರಗಳಿಗೂ ಚರ್ಚೆಗಳಿಗೂ ಕೈಹಾಕಿಲ್ಲ.

## ಪಾಠಶೋಧನೆ

ಈ ಗ್ರಂಥದ ಪ್ರಥಮ ಮುದ್ರಣಕ್ಕೆ ಎರಡು ಹಸ್ತಪ್ರತಿಗಳನ್ನು ಆಧಾರವಾಗಿಟ್ಟುಕೊಂಡಿತ್ತು. ಅವುಗಳಲ್ಲಿ ಒಂದು ಓಲೆಯ ಪ್ರತಿ (ಕ). ಅದರಲ್ಲಿ ಹನ್ನೆರಡು ಸ್ಥಲಗಳಿದ್ದುವು. ಇನ್ನೊಂದು ಕಾಗದದ ಪ್ರತಿ (ಖ). ಅದರಲ್ಲಿ ಹನ್ನೆರಡು ಸ್ಥಲಗಳೂ ಹದಿಮೂರನೆಯ ಸ್ಥಲದಲ್ಲಿ ಸ್ವಲ್ಪಭಾಗವೂ ಇದ್ದುವು. ಆ ಎರಡರಲ್ಲಿ ಓಲೆಯ ಪುಸ್ತಕದ ಪಾಠವು ಉತ್ತಮವಾಗಿದ್ದದ್ದರಿಂದ ಸಾಮಾನ್ಯವಾಗಿ ಅದರ ಪಾಠವನ್ನೇ ಪ್ರಥಮ ಮುದ್ರಣದಲ್ಲಿ ಅನುಸರಿಸಿತ್ತು.' ಈಚೆಗೆ ಮತ್ತೆರಡು ಹಸ್ತಲಿಖಿತಪ್ರತಿಗಳು ದೊರೆತುವು. ಒಂದು ಶ್ರೀಮಾನ್ ಪಿ. ಜಿ. ಹಳಕಟ್ಟಿಯವರು ಕಳುಹಿಸಿದ ಕಾಗದದ ಪ್ರತಿ (ಗ). ಇದರಲ್ಲಿ ಹದಿಮೂರನೆಯ ಸ್ಥಲವು ಸಂಪೂರ್ಣವಾಗಿದೆ. (ಆದರೆ ಈ ಸ್ಥಲದ ಕೊನೆಯ ಭಾಗದಲ್ಲಿ ಹೆಚ್ಚು ತಪ್ಪುಗಳಿರುವುದರಿಂದ ಈ ಭಾಗವು ಹರಿಹರನದೋ ಅಲ್ಲವೋ ಎಂಬ ಅನುಮಾನಕ್ಕೆ ಆಸ್ಪದವಿದೆ.) ಮತ್ತೊಂದು ಮದ್ರಾಸ್ ಓರಿಯೆಂಟಲ್ ಲೈಬ್ರರಿಯವರು ಕಳುಹಿಸಿದ ಪ್ರತಿ (ಘ). ಈ ಎರಡು ಹೊಸ ಹಸ್ತಲಿಖಿತಪ್ರತಿಗಳ ಸಹಾಯದಿಂದ ಗ್ರಂಥವನ್ನು ಅಲ್ಲಲ್ಲಿ ಸ್ವಲ್ಪಮಟ್ಟಿಗೆ ತಿದ್ದಿ ಪರಿಷ್ಕರಿಸಿದೆ.

ಭಾಷೆಯ ದೃಷ್ಟಿಯಿಂದ ವಿಚಾರಾರ್ಹವಾದ ಕೆಲವಂಶಗಳು ಈ ಗ್ರಂಥದಲ್ಲಿವೆ. ಸಾಮಾನ್ಯವಾಗಿ ಹಳಗನ್ನಡದ ಶಬ್ದರೂಪಗಳು ಪ್ರಯೋಗವಾಗುತ್ತವೆ. ಜತೆಗೆ ಕೆಲವು ವೇಳೆ ಹೊಸಗನ್ನಡದ ರೂಪಗಳು ಬರುತ್ತವೆ. ಭಾಷೆ ಸಾಮಾನ್ಯವಾಗಿ ವ್ಯಾಕರಣಬದ್ಧವಾಗಿದ್ದರೂ ವ್ಯಾಕರಣನಿಯಮಗಳಿಗೆ ಹೊಂದದ ಕೆಲವು ಪ್ರಯೋಗಗಳು ದೊರೆಯುತ್ತವೆ. ಹರಿಹರನ ಕಾಲದಲ್ಲಿ ಕನ್ನಡಭಾಷೆ ಹಳಗನ್ನಡದ ರೂಪದಿಂದ ಹೊಸಗನ್ನಡದ ರೂಪಕ್ಕೆ ತಿರುಗುತ್ತಿತ್ತು. ಹರಿಹರನೂ ಕೆಲವು ಹೊಸ ರೂಪಗಳನ್ನು ಪ್ರಯೋಗಿಸಿರಬಹುದು. ಆದರೆ ಈ ಗ್ರಂಥದಲ್ಲಿ ದೊರೆಯುವ ವಿಶೇಷ ಪ್ರಯೋಗಗಳೆಲ್ಲವೂ ಹರಿಹರನವೋ ಅಥವಾ ಗ್ರಂಥವನ್ನು ಪ್ರತಿಮಾಡಿದವರವೋ ನಿರ್ಧರಿಸುವುದು ಕಷ್ಟ. ನಮ್ಮ ಮನಸ್ಸಿಗೆ ತೋರಿದಂತೆ ಗ್ರಂಥವನ್ನು ತಿದ್ದಿಬಿಡುವುದಕ್ಕಿಂತಲೂ ಹಸ್ತಲಿಖಿತಪ್ರತಿಗಳಲ್ಲಿ ಕಂಡುಬರುವ ಪ್ರಯೋಗಗಳಿಗೂ ತಕ್ಕಷ್ಟು ಗೌರವವನ್ನು ಕೊಡುವುದು ನ್ಯಾಯವೆಂದು ಭಾವಿಸಿ ಸಾಧ್ಯವಾದ ಮಟ್ಟಿಗೆ ಹಸ್ತಲಿಖಿತಪ್ರತಿಗಳಲ್ಲಿದ್ದ ರೂಪಗಳನ್ನೇ ಉಳಿಸಿರುತ್ತೇವೆ. ಉದಾಹರಣೆಗೆ, 'ನುಡಿವುತಂ,' 'ಈವುತಂ' ಮೊದಲಾದ ಪ್ರಯೋಗಗಳು ಹಳಗನ್ನಡ ಹೊಸಗನ್ನಡ ಎರಡಕ್ಕೂ ಹೊಂದುವುದಿಲ್ಲ. ಇಲ್ಲಿರುವ ವಕಾರಾಗಮಕ್ಕೆ ಬದಲಾಗಿ ಯಕಾರಾಗಮವು ಬರಬೇಕು. ಆದರೆ ಈ ಗ್ರಂಥದಲ್ಲಿ ಇಂಥ ಪ್ರಯೋಗ

ಗಳು ಬೇಕಾದಷ್ಟು ಬರುತ್ತವೆ. ಎಲ್ಲ ಪ್ರತಿಗಳಲ್ಲಿಯೂ ಇದೇ ಪ್ರಯೋಗವೇ ದೊರೆಯುತ್ತದೆ. ಪ್ರತಿಮಾಡಿದವರು ಮರೆತಾದರೂ ಒಂದು ಸಲವೂ ಬೇರೆ ಪ್ರಯೋಗವನ್ನು ಮಾಡುವುದಿಲ್ಲ. ಈ ವಿಧವಾದ ಪ್ರಯೋಗವು ಒಂದು ಕಾಲ ದಲ್ಲಿ ಇದ್ದಿತೆಂಬುದಕ್ಕೆ ಶಾಸನಗಳಲ್ಲಿಯೂ ಇತರ ಗ್ರಂಥಗಳಲ್ಲಿಯೂ ಆಧಾರ ವುಂಟು. ಆದಕಾರಣ ಈ ಪ್ರಯೋಗವು ಹರಿಹರನದೇ ಆಗಿದ್ದರೂ ಇರಬಹುದು. ಏನೇ ಆಗಲಿ, ಅದನ್ನು ತಿದ್ದುವುದು ನ್ಯಾಯುವೋ ಅಲ್ಲವೋ ಎಂಬ ಸಂದೇಹ ಬರುವುದರಿಂದ ಅದನ್ನು ಹಾಗೆಯೇ ಉಳಿಸಿರುತ್ತೇವೆ. ಕುಡು, ಕೊಡು ; ಬರ್ಪ, ಬಪ್ಪ ; ಪಿಂಗು, ಹಿಂಗು ;-ಒಡೆ,-ಅಡೆ ;-ಒಳ್,-ಒಳು ;-ಅರ್,-ಅರು—ಹೀಗೆ ಒಂದೇ ಪದದ ಅಥವಾ ಪ್ರತ್ಯಯದ ಭಿನ್ನರೂಪಗಳು ಈ ಗ್ರಂಥದಲ್ಲಿ ಒಂದೊಂದು ಒಂದೊಂದು ಕಡೆ ಬರುತ್ತವೆ. ಇಂಥ ಸಂದರ್ಭಗಳಲ್ಲಿ ಎರಡು ರೂಪಗಳನ್ನೂ ಉಳಿಸಿದೆ. ಆದರೆ ಕೆಲವು ಅರ್ವಾಚೀನ ಪ್ರಯೋಗಗಳು ಗ್ರಂಥಕರ್ತನವಲ್ಲದಿರ ಬಹುದೆಂದು ತೋರಿದ್ದರಿಂದಲೂ ಅವುಗಳ ಪ್ರಾಚೀನರೂಪಗಳೂ ಮೂಲಪ್ರತಿ ಗಳಲ್ಲಿ ಕಂಡುಬರುವುದರಿಂದಲೂ ಅಂಥ ಸಂದರ್ಭಗಳಲ್ಲಿ ಪ್ರಾಚೀನರೂಪಗಳನ್ನು ಮಾತ್ರ ಅಂಗೀಕರಿಸಿದ್ದೇವೆ. ಒಟ್ಟಿನಲ್ಲಿ ಗ್ರಂಥಪರಿಷ್ಕರಣ ವಿಚಾರದಲ್ಲಿ ಯಾವ ಒಂದು ನಿಯಮವನ್ನಾಗಲಿ ಪಟ್ಟುಹಿಡಿದು ಅನುಸರಿಸಲು ಸಾಧ್ಯವಾಗಲಿಲ್ಲ.

ಹಸ್ತಲಿಖಿತಪ್ರತಿಗಳಲ್ಲಿ ವಿರಾಮವನ್ನು ಸೂಚಿಸುವುದಕ್ಕೆ ಇಷ್ಟಬಂದ ಕಡೆ ಗಳಲ್ಲಿ ಒಂದು ಗೀಟನ್ನು ಉಪಯೋಗಿಸಿದ್ದಾರೆ. ಇದಕ್ಕೆ ಬದಲಾಗಿ ಈಗ ರೂಢಿ ಯಲ್ಲಿರುವ ವಿರಾಮಸಂಜ್ಞೆಗಳನ್ನು ಸಂದರ್ಭೋಚಿತವಾಗಿ ಉಪಯೋಗಿಸಿದ್ದೇವೆ. ಹೀಗೆ ಮಾಡುವಾಗ ವಿಸಂಧಿಯನ್ನು ತರಬೇಕಾದದ್ದು ಆವಶ್ಯಕವಾಯಿತು. ಮೂಲಪ್ರತಿಗಳಲ್ಲಿಯೇ ವಿಸಂಧಿಯ ಪ್ರಯೋಗಗಳು ತಕ್ಕಮಟ್ಟಿಗೆ ಕಂಡು ಬಂದದ್ದರಿಂದ ಹೀಗೆ ಮಾಡುವುದು ಅಸಾಧುವಲ್ಲವೆಂದು ತೋರಿತು. ಗದ್ಯದಲ್ಲಿರುವ ಸ್ಥಲಗಳಲ್ಲಿ ಭಾಗಗಳನ್ನು ವಿಂಗಡಿಸಿರುವುದು ಕಾಗದದ ಪ್ರತಿಯಲ್ಲಿ ಕಂಡು ಬರು ತ್ತದೆ. ಆ ವಿಧವಾದ ವಿಭಾಗವು ಕೆಲವು ಕಡೆ ತೃಪ್ತಿಕರವಾಗಿರಲಿಲ್ಲ ; ಆದಕಾರಣ ವಿಷಯಕ್ಕೆ ಅನುಗುಣವಾಗಿ ವಿಭಾಗಮಾಡಿದ್ದೇವೆ. ಗದ್ಯದಂತೆ ಪದ್ಯದಲ್ಲಿಯೂ ವಿಷಯ ವಿಭಾಗವನ್ನು ವಾಚಕರ ಸೌಕರ್ಯಕ್ಕಾಗಿ ಸೂಚಿಸಿದ್ದೇವೆ.

## ಕೃತಜ್ಞತಾಸೂಚನೆ

ಈ ಗ್ರಂಥದ ಮೊದಲನೆಯ ಮುದ್ರಣದ ಕಾಲದಲ್ಲಿ ಶ್ರಮವನ್ನು ಲಕ್ಷಿಸದೆ ನನ್ನ ಜತೆಗೆ ಸಮಭಾಗಿಗಳಾಗಿ ಉತ್ಸಾಹದಿಂದ ಕೆಲಸಮಾಡಿ ಸಹಾಯಮಾಡಿದ

ಮಹಾರಾಜಾ ಕಾಲೇಜಿನ ಕನ್ನಡದ ಲೆಕ್ಚರರ್ ಮ|| ರಾ|| ಟಿ. ಎನ್. ಶ್ರೀಕಂಠಯ್ಯ, ಎಂ.ಎ. ಅವರೂ, ಓಲೆಯ ಪ್ರತಿಯಲ್ಲಿರುವ ರಗಳೆಗಳನ್ನು ಓದುವುದರಲ್ಲಿಯೂ ಪೀಠಿಕೆಗೆ ಬೇಕಾದ ವಿಷಯಗಳನ್ನು ಸಂಗ್ರಹಿಸುವುದರಲ್ಲಿಯೂ ಇತರ ವಿಧಗಳಲ್ಲಿಯೂ ಸಹಾಯಮಾಡಿದ, ಆಗ ಮೈಸೂರು ಓರಿಯೆಂಟಲ್ ಲೈಬ್ರರಿಯಲ್ಲಿದ್ದು ಈಗ ಮಹಾರಾಜರವರ ಕಾಲೇಜಿನಲ್ಲಿ ಸೀನಿಯರ್ ಕನ್ನಡ ಪಂಡಿತರಾಗಿರುವ ಮ|| ರಾ|| ಡಿ. ಎಲ್. ನರಸಿಂಹಾಚಾರ್ಯ, ಎಂ.ಎ. ಅವರೂ ಈ ದ್ವಿತೀಯ ಮುದ್ರಣದಲ್ಲಿಯೂ ನನಗೆ ಅನೇಕ ವಿಧವಾಗಿ ಸಹಾಯ ಮಾಡಿದ್ದಾರೆ. ಇವರಿಬ್ಬರಿಗೂ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ಈ ಗ್ರಂಥವನ್ನು ಮೊದಲು ಕಂಡುಕೊಂಡು ಅದನ್ನು ಬೆಳಕಿಗೆ ತರಲು ನನಗೆ ಪ್ರೇರಣೆ ಪ್ರೋತ್ಸಾಹಗಳನ್ನಿತ್ತ ನನ್ನ ವಿದ್ಯಾಗುರುಗಳಾದ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರಿಗೆ ಚಿರಋಣಿಯಾಗಿರುತ್ತೇನೆ. ಪ್ರಥಮ ಮುದ್ರಣದ ಕಾಲದಲ್ಲಿ ಹಸ್ತಲಿಖಿತಪ್ರತಿಗಳನ್ನು ಉಪಯೋಗಿಸಲು ಅನುಮತಿ ಇತ್ತ ಮೈಸೂರು ಓರಿಯೆಂಟಲ್ ಲೈಬ್ರರಿಯ ಅಧಿಕಾರಿಗಳಿಗೂ, ಈ ದ್ವಿತೀಯ ಮುದ್ರಣದ ಕಾಲಕ್ಕೆ ಕಾಗದದ ಹಸ್ತಲಿಖಿತಪ್ರತಿಯನ್ನು ಕಳುಹಿಸಿಕೊಟ್ಟ ರಾವ್ ಸಾಹೇಬ್ ಪಿ. ಜಿ. ಹಳಕಟ್ಟಿ, ಬಿ.ಎ., ಎಲ್ಎಲ್.ಬಿ. ಅವರಿಗೂ ಓಲೆಯ ಪ್ರತಿಯೊಂದನ್ನು ಕಳುಹಿಸಿದ ಮದ್ರಾಸ್ ಓರಿಯೆಂಟಲ್ ಲೈಬ್ರರಿಯ ವ್ಯವಸ್ಥಾಪಕರಿಗೂ, ಅದನ್ನು ದೊರಕಿಸಿಕೊಟ್ಟ ಡಾ|| ಎ. ಎನ್. ನರಸಿಂಹಯ್ಯ, ಎಂ.ಎ., ಎಲ್.ಟಿ., ಪಿಎಚ್.ಡಿ. ಅವರಿಗೂ ನಾನು ಕೃತಜ್ಞನಾಗಿರುವುದಲ್ಲದೆ ನಾನು ಕೊಟ್ಟ ತೊಂದರೆಗಳನ್ನು ತಾಳ್ಮೆಯಿಂದ ಸಹಿಸಿಕೊಂಡು ಈ ಗ್ರಂಥವನ್ನು ಅಂದವಾಗಿಯೂ ಉತ್ತಮವಾಗಿಯೂ ಮುದ್ರಣಮಾಡಿ ಕೊಟ್ಟದ್ದಕ್ಕಾಗಿ ಮೈಸೂರು ವೆಸ್ಲಿ ಪ್ರೆಸ್ಸಿನವರಿಗೆ ಕೃತಜ್ಞನಾಗಿದ್ದೇನೆ.

ಈ ಗ್ರಂಥವನ್ನು ಪಠ್ಯಪುಸ್ತಕವಾಗಿ ನೇಮಿಸಿ ಈ ಎರಡನೆಯ ಮುದ್ರಣಕ್ಕೆ ಅವಕಾಶವನ್ನು ಒದಗಿಸಿಕೊಟ್ಟ ಬೊಂಬಾಯಿ ವಿಶ್ವವಿದ್ಯಾನಿಲಯದ ಕನ್ನಡ ಪಾಠ ನಿಯಾಮಕ ಸಮಿತಿಯವರಿಗೆ ನನ್ನ ವಂದನೆಗಳನ್ನು ಈ ಮೂಲಕ ಸೂಚಿಸಲು ಬಯಸುತ್ತೇನೆ.

**ಟಿ. ಎಸ್. ವೆಂಕಣ್ಣಯ್ಯ.**

# ಬಸವರಾಜದೇವರ ರಗಳೆ

## ಮೊದಲನೆಯ ಸ್ಥಲ

ಶ್ರೀಮದ್ಬ್ರಹ್ಮಾಚ್ಯುತೇಂದ್ರಾ[1]ಸು[1]ರಗುರುಸುಮನೋಮೌಳಿವಿನ್ಯಸ್ತಪಾದಂ
ಹೇಮಾಗಾಗಾರಸೀಶಂ ಮುನಿಜನಹೃದಯಾಂಭೋಜವಾಸಂ ಭವಾನೀ-|
ವಾಮಾಂಗಾಲಿಂಗ[2]ಸಂ ಭೂ[2]ಸುರನಿಧಿ ಮೆಱೆದಂ ಭೂಮಿಯೊಳ್ ಚಂದ್ರಚೂಡಂ
ಪ್ರೇಮಂ ಕೈಮಿಕ್ಕು ಪಂಪಾಪುರಪತಿ ಬಸವಂಗೊಲ್ದು ಸಂತೋಷದಿಂದಂ || ೧*

ಶ್ರೀಮೇರುಮಧ್ಯದೊಳಗೊಪ್ಪುತೆ ವಿಳಾಸದಿಂ
ಪ್ರೇಮದಿಂ ಹಂಪೆಯ ವಿರೂಪಾಕ್ಷನೊಪ್ಪದಿಂ |
ಅಪ್ರತಿಮನಾನಂದಮೂರ್ತಿಯೊಪ್ಪುತ್ತಿರಲು
ಸರ್ಪಭೂಷಣನೊಪ್ಪದಿಂದೊಪ್ಪಿ ಕುಳ್ಳಿರಲು |
ಕೆಂಜೆಡೆಯ ಚಂದ್ರಕಳೆಯರಸನೊಪ್ಪುತ್ತಿರಲು
ರಂಜಿಸುವ ಪುಲಿಚರ್ಮದಭವನೊಪ್ಪುತ್ತಿರಲು |
ಆತನ ವಿಳಾಸವದನೇಸೆಂಬೆನೆಸೆದಿರಲು
ನೂತನವಿಳಾಸದಿಂ ಗಿರಿಜೆ ವಾಮದೊಳಿರಲು |
ಇಂತು ಸರ್ವೇಶ್ವರಂ ಹರುಷದಿಂದೊಪ್ಪಿರಲು
ಶಾಂತಾರ್ಕಕೋಟಿಪ್ರಭಾಪುಂಜನೆಸೆದಿರಲು |
ಸಿರಿಸರಸ್ವತಿಯರಂದೊಲಿದು ಚಾಮರವಿಕ್ಕೆ
ಅರರೆ ಇಂದ್ರಾಣಿಯರು ನಲಿದು ಸೀಗುರಿಯಿಕ್ಕೆ |
ರುದ್ರಕನ್ನೆಯರೊಲಿದು ಸಿಂಗರಿಸಿ ಕುಳ್ಳಿರಲು
ಉದ್ದಂಡನುಂ ವೀರಭದ್ರನುಂ ಕುಳ್ಳಿರಲು |

---

1 ಮ ? ; 2 ನಾಭಾ (ಕ.)

ಗಣಪನುಂ ಸ್ವಾಮಿಯುಂ ಕೆಲಬಲದೊಳೊಪ್ಪಿರಲು
ಗಣನಿಕರ ಘುಳುಘುಳಿಸುತುರವಣಿಸಿ ಕುಳ್ಳಿರಲು |
ಬ್ರಹ್ಮಾದಿನಿಚಯವಂತೊಂದೆಸೆಯೊಳೊಪ್ಪಿರಲು
ಅಮ್ಮಮ್ಮ ಹರಿನಿಕರ [1]ಹರಹಿನಿ[1]ಂದೊಪ್ಪಿರಲು |
ಮನುಗಳುಂ ಮುನಿಗಳುಂ ಸಿದ್ಧವಿದ್ಯಾದಿಗಳು-
ಮನುಪಮನ ಕೆಲಬಲದೊಳೊಪ್ಪಿ ತೋಱುತ್ತಿರಲು |
ವೃಷಭಮುಖ ಹರುಷದಿಂದೊಪ್ಪಿ ಕುಳ್ಳಿರುತಿರಲು
ವೃಷಭರಾಜಂ ಹರುಷದಿಂದಿಪ್ಪ ಸಮಯದೊಳು |
ಮುಂತೆ ಕಿನ್ನರರು ನವರಸದಿ ಪಾಡಲ್ಕಾಗ-
ನಂತರಂ ಭೃಂಗೀಶ ನರ್ತನಕೆ ನಿಂದಾಗ |
ಹೊಸ ಪರಿಯ ಗತಿಗಳಂ ನಟಿಸಿ ತೋಱುತ್ತಮಿರೆ
ಅಸಮಾಕ್ಷ ಕರುಣದಿಂ ನೋಡಿ ನಸುನಗುತಮಿರೆ |
ಕಂಪುಳ್ಳ ಸಂಪಗೆಯ ಪೂಗಳಂ ತಿಱಿತಂದು
ಹೆಂಪಿನಿಂ ಶಶಿಧರನ ಸಿರಿಮುಡಿಗೆ ಬೇಕೆಂದು
ತಂದೊರ್ವ ಮಾಲೆಗಾಱಂ ಭರದಿ ಕೊಡಲಲ್ಲಿ
ಮುಂದಿರ್ದ ವೃಷಭಮುಖನಂ ಕರೆವುತಿರಲಲ್ಲಿ |
ಹರುಷದಿಂದೈತಂದು ಕೈಮುಗಿದು ನಿಂದಿರಲು
ಹರನ ಕೃಪೆಯಾಯಿತೆಂದೆನುತೆ ಪುಳಕಿಸುತಿರಲು |
ನೀನೀ ಪ್ರಸಾದಮಂ ಶರಣತತಿಗೀಯೆನುತೆ
ಮಾನನಿಧಿ ವೃಷಭ[2]ಮುಖಗಂದೀ[2]ಯೆ ಪುಳಕಿಸುತೆ |
ಮುಂದೆ ಪರಮೋತ್ಸಾಹದಿಂದುಕ್ಕಿ ಮೈಯಿಕ್ಕಿ
ಇಂದುಮೌಳಿಯ ಕೃಪೆಗೆ ಮತ್ತೊಮ್ಮೆ ಮೈಯಿಕ್ಕಿ |
ಕುಣಿವುತಂ ಕುಕಿಲಿಱಿವುತಂ ಪರ್ವಿ ಕೊರ್ವುತಂ
ತ್ರಿಣಯನನ ಬೆಸನನಾಂ ಪಡೆದೆನೆನುತುರ್ವುತಂ |

---

[1] ಹರುಷದಿ (ಖ.); [2] ರಾಜಂಗೀ (ಖ.)

ಪರವಶೀಭೂತನಾಗುತ್ತೆ ಮಱಹಂ ಹೊತ್ತು
ಹರುಷದಿಂ ದೇವಿಯರ್ಗಿತ್ತು ಗಣಪತಿಗಿತ್ತು |
ಬಿರುದ ಗಣನಿವಹಕ್ಕೆ ಹರಿಯಜಸುರರ್ಗಿತ್ತು
ವರಮುನಿಜನಕ್ಕೆ ಮನುಸಿವಹಕ್ಕೆ ಸಲಿದಿತ್ತು |
ಶಿವಪುತ್ರನಂ ಸ್ಕಂದದೇವನಂ ಮಱೆವುತಂ
ತವೆ ಸಭೆಯೊಳಿರ್ದರ್ಗೆ ವೃಷಭಮುಖನೀವುತಂ |
ಎಲ್ಲರ್ಗೆ ಕೊಟ್ಟೆನೆಂದಭವಂಗೆ ಬಿನ್ನೈಸೆ
ಅಲ್ಲಿಯೆನಗೀಯನೆಂದಾ ಸ್ವಾಮಿ ಬಿನ್ನೈಸೆ |
ಕೊಟ್ಟೆನೆಂದಾ ವೃಷಭಮುಖನಲ್ಲಿ ನುಡಿವುತಿರೆ
ಕೊಟ್ಟುದಿಲ್ಲೆನಗೆ ಪುಸಿಮಾತದೇಕೆನುತಮಿರೆ |
ಎನೆ ವೃಷಭಮುಖನಲ್ಲಿ ಕೊಟ್ಟೆನೆರಡಿಲ್ಲಯ್ಯ
ನಿನಗೆ ಕೊಡದಿರ್ಪನೇ ಕೇಳು ಕೇಳೆನ್ನಯ್ಯ |
ಎಂದಡೆ ಕುಮಾರಕಂ ತಂದೆಯ ಮೊಗಂನೋಡಿ
ಒಂದುವಂ ನುಡಿಯಲಱಯದೆ ನೋಡುತಿರೆ ಬಾಡಿ |
ಮಗನ ಕರುಣಾಸ್ಯಮಂ ಚಂದ್ರಚೂಡಂ ಕಂಡು
ನಗುತೆತ್ತಿ ತ[1]ಕ್ಕೈ[1]ಸುತಂ ನಿರೋಧಂಗೊಂಡು |
ಕಂಡಯ್ಯ ವೃಷಭಮುಖ ದೇವಿಯರು ನೋಡುತಿರೆ
ತಂಡತಂಡದ ಗಣೇಶಪ್ರತತಿ ನೋಡುತಿರೆ |
ಹರಿಯಜರ ಸುರ[2][ರ] ಸುರರಾಜರ ಸಮಕ್ಷದೊಳು
ಅರವರಿಸದೀ ಸಭೆಯೊಳೆನ್ನಯ ಸಮಕ್ಷದೊಳು |
ಹುಸಿನುಡಿವರೇ ಕುಡದೆ ಎನ್ನಯ ಕುಮಾರಂಗೆ
ಎಸೆವ ನಿಜಭಕ್ತಿಭೂಷಣನೆನಿಪ ವೀರಂಗೆ |
ಎಮಗೆ ಕುಡದಿರ್ದಡಂ ಸೈರಿಸುವೆವಾವಯ್ಯ
ವಿಮಳಶಿಶುವಿಂಗೆ ಹುಸಿನುಡಿಯೆ ಸೈರಿಸೆವಯ್ಯ |

---

[1] ಕ್ಕವಿ (ಕ.); [2] ಪ (ಕ. ಖ.)

ಇದಱಿಂದ[1][ವೊ]ಂದು ಜನನಂ ನಿನಗೆ ದೊರಕಿತ್ತು
ಮುದದಿಂದ ಹೋಗಯ್ಯ ಜನನವಂ ನೀ ಹೊತ್ತು।
ಧರಣಿಯೊಳು ವೃಷಭಮುಖ ಹುಟ್ಟೆಂದು ಬೆಸಸುತಿರೆ
ಕೊರಗಿ ಕಳೆಗುಂದಿ ಬಿನ್ನೈಸಿದಂ ಕೇಳುತಿರೆ।
ಇಂದುಧರ ಚಿತ್ತೈಸೆನುತ್ತೆಂದು ಕೈಮುಗಿದು
ತಂದೆ ಶರಣಾಗು ಶರಣೆನಗೆ ಹುಟ್ಟಲ್ಕರಿದು।
ಕಾಮಾರಿ ಷಡುವರ್ಗದುಬ್ಬರಂ ಧರೆಯಲ್ಲಿ
ಸೋಮಧರ ತಾಪತ್ರಯದ ಬೇಗೆ ಪಿರಿದಲ್ಲಿ।
ಹುಸಿ [2]ದ[2]ಂಬು ಹಿಂಸೆ ಮೂರ್ಖತೆಯುಂಟು ಧರೆಯೊಳಗೆ
ವಶವಲ್ಲದಾ[3]ಲೀಢ[3]ವನ್ಯಾಯುವಿಳೆಯೊಳಗೆ।
ಅಲ್ಲಿ ಜನಿಯಿಸಿ ಬಳಿಕ್ಕೆಂದು ಒಪ್ಪೆಂ ದೇವ
ಎಲ್ಲ ತೆಱದಿಂ ನಿಮಗೆ ದೂರವಪ್ಪೆಂ ದೇವ।
ಕರುಣಿಪುದು ಜಲಶಯನನಯನಚರಣಾಭರಣ
ಶರಣಸಂಘಾತಸಂಸಾರಭಯನಿರುಹರಣ।
ಎನೆ ಶಿವಂ ನಸುನಗುತ್ತಂಜಬೇಡೆಲೆ ಮಗನೆ
ನಿನಗೆ ಹಿತ[4][ನಾ]ಗಿ ಸಖ[4][ನಾ]ಗಿ ಬಪ್ಪೆಂ ಮಗನೆ।
ಇಲ್ಲಿ ಪ್ರಸಾದಮಂ ಕುಡದಿರ್ದ ಬಳಿವಿಡಿದು
ಅಲ್ಲಿ ಪ್ರಸಾದಮಂ ವಾದಿನಿಂದಂ ಪಡೆದು।
ಗಣಸಮಕ್ಷದ ಪುಸಿಗೆ ಶರಣರ್ಗೆ ಮಾಡುತ್ತೆ
ಅಣಿಯರದೊಳೆನ್ನ ಭಕ್ತಿಯನಿಳೆಗೆ ಕೂಡುತ್ತೆ।
ಎನ್ನ ಪ್ರಸಾದಸಾಮರ್ಥ್ಯಮಂ ತೋಱುತಂ
ಮನ್ನಣೆಯೊಳಿಲ್ಲಿಗೈತಪ್ಪುದಿದು ನಿರ್ಮಿತಂ।
ವೃಷಭಮುಖ ವೃಷಭನಾಮಂ ಪೆಸರ್ ನಿನಗಾಗೆ
ವೃಷಭೇಂದ್ರನಲ್ಲಿ ನಿನಗಿಹಪರಕೆ ಗುರುವಾಗೆ।

---

[1] ಲೊ (ಕ. ಖ.); [2] ಡ (ಕ.); [3] ರಿದ್ರ (ಖ.); [4] ವಾ (ಕ. ಖ.)

ಮೆಱೆದಪಂ ಹೋಗಯ್ಯ ಹೋಗೆಂದು ಬೆಸಸುತಿರೆ
ಕಱೆಗೊರಳನಕ್ಕಱಿಂ ಕರುಣದಿಂ ಕಳುಪುತಿರೆ |
ವೃಷಭಮುಖನಲ್ಲಿ ಹರನಾಜ್ಞೆಯಂ ಕೈಕೊಂಡು
ವೃಷಭರಾಜನ ಕರುಣಮುಮನೊಚ್ಚ ತಂಗೊಂಡು |
ಶರಣರಂ ಬಲವಂದನುಜ್ಞೆಯಂ ಕೈಕೊಂಡು
ಕರುಣಮಂ ತೋಱುತೆ ಕುಮಾರನಂ ಬೀಳ್ಕೊಂಡು |
ಬಂದು ಭೂಲೋಕದೊಳು ಕೀರ್ತಿಯಂ ಪಡೆದಿರ್ಪ
ಸಂದಣಿಪ ವಿಪ್ರಸಂತಾನದಿಂದಿಡಿದಿರ್ಪ |
ಶಿವಪುರಾಣಾಗಮಕುಳಂಗಳಿಂದೆಸೆದಿರ್ಪ
ಶಿವ ಶಾಸ್ತ್ರಘೋಷಸಂಗೀತದಿಂದಿಡಿದಿರ್ಪ |
ಅಗ್ರಹಾ[1]ರಂ[1] ಬಾಗೆವಾಡಿಯೊಳಗೆಸೆದಿರ್ಪ
ಅಗ್ರೇಶ್ವರಂ ಕಮ್ಮೆಕುಲದಿಂದೆ ಮೆಱೆದಿರ್ಪ |
ವಿಪ್ರನಿರ್ಪಂ ಮಾದಿರಾಜನಾತನ ಸತಿಯು
ಅಪ್ರತಿಮಮಾದಾಂಬೆಯೆಂದೆಂಬ ಗುಣವತಿಯು |
ಅತಿಮಾನಿಯತಿಜ್ಞಾನಿಯೆಂದೆನಿಪ್ಪಾ ಸತಿಯ
ಪತಿಭಕ್ತೆಯುದರದೊಳು ಪುಗಲಲ್ಲಿ ಗುಣವತಿಯ |
ನಡೆ ತಳುವಿ ತಳ್ಕಿಕ್ಕೆ ಕೂಡೆ ಭಾವಂಗಳಿಂ
ನುಡಿ ಬಳಲ್ದೊಪ್ಪುತಿರೆ ಮೆಲ್ಪಿನ ಗುಣಂಗಳಿಂ |
ಮಾರನ ದೊಣೆಯನಿಳಿಸಿ ಕಣೆಕಾಲ್ಗಳೊಪ್ಪುತಿರೆ
ಊರುದಂಡಂ ರಂಭೆಗಳ ಸೊಬಗನಿಳಿಸುತಿರೆ |
ತ್ರಿವಳಿ ವೈಗರೆಯೆ ಹೊಕ್ಕುಳ ಗುಣ್ಪು ಹೊಱಸೂಸೆ
ನವನೀಳಕಾಂತಿಯಿಂದಿದಿರೇಱುತಿರೆ ಬಾಸೆ |
ನಡು ಹೊಂಗಿ ಕಿಳ್ಪೊಡೆಯದೊಪ್ಪದಿಂ ಹಿಗ್ಗುತಿರೆ
ಮೃಡನ ಭಕ್ತನ ಪುಣ್ಯಸತಿಯುದರವೊಪ್ಪುತಿರೆ |

---
[1] ರದ (ಖ.)

ಕಮಳಮುಕುಳಂಗಳೊಳು ಭೃಂಗಂಗಳಿಪ್ಪಂತೆ
ಅಮರ್ದು ಕಪ್ಪೇಱೆ ಕುಚಯುಗಳಚೂಚುಕ[1][ವ]ಂತೆ |
ಕಕ್ಷಪುಟದಲ್ಲಿ ಕತ್ತುರಿಯ ಹೊಗರೆತ್ತುತಿರೆ
ಅಕ್ಷಿಗಳು ಕರುಣರಸಮಂ ಹೊತ್ತು ಒಳಲುತಿರೆ |
ಕುಂತಳಂ ಕೊರ್ಬಿಂ ಕಪಲ್ತು ಕುಡಿನಿಮಿರುತಿರೆ
ಅಂತರಂಗದ ಗರ್ಭವೊಡನೊಡನೆ ಬೆಳೆವುತಿರೆ |
ಅಂಗಲತೆ ನಯವೇಱೆ ಬೇಱೊಂದು ಚೆಲುವಾಗೆ
ಮಂಗಳಾನನವಲರ್ದ ರಾಜೀವದಂತಾಗೆ |
ಇಂತು ನವಮಾಸವಾಕೆಯೊಳಾಗೆ ಸನ್ನುತಂ
ಅಂತಃಸ್ಥಳದೆ ಪುಣ್ಯಶಿಶು ತೊಳಗಿ ಹೊಳೆವುತಂ |
ಮುಕುರದೊಳು ಮಾರ್ಪೊಳೆವ ಚಂದ್ರಮಂಡಲದಂತೆ
ಸುಕರಾಂಬುವೊಳ್ ಪೊಳೆವ ಹಂಸ[2]ಶಾ[2]ಬಕದಂತೆ |
ಪೊಳೆದು ಥಳಥಳಿಸುತಂ ಪೊಱಮಡಲ್ ಬಗೆಗೊಂಡು
ಇಳೆಗೆ ಶಿವಭಕ್ತಿಯಂ ತೀವಲ್ ಮನಂಗೊಂಡು |
ಚಿಪ್ಪಿನೊಳ್ ಮುತ್ತು ಕಾಸಾರದೊಳ್ ಪಂಕಜಂ
ಅಪ್ಪಿನಿಂ ತಣ್ಪು ಮಲಯಾದ್ರಿಯಿಂ ಮಲಯಜಂ |
ಕೇತಕೀಕುಸುಮದಿಂ ರುಚಿರತರಪರಿಮಳಂ
ಶೀತಕರನಿಂ ಸಾಂದ್ರತರಕೌಮುದೋಜ್ಜ್ವಳಂ |
ಪುಟ್ಟುವಂತಿರೆ ಪುಟ್ಟಿದಂ ಶಿವನ ಶಿಶುವಲ್ಲಿ
ಪುಟ್ಟಿದಂ ಸಂಸಾರಸುಖದ ಲೀಲೆಯಿನಲ್ಲಿ |
ಸುಮುಹೂರ್ತವೇ ಗಂಡುರೂಪಾದ ತೆಱನಾಗೆ
ಅಮಮ ಕಾರಣಿಕಶಿಶು ಜನಿಯಿಸಿದನನುವಾಗೆ |
ಆಗಳಾ ಪುತ್ರಂಗೆ ಜಾತಕರ್ಮವ ಮಾಡಿ
ರಾಗದಿಂ ಬಸವನೆಂಬಭಿಧಾನ[3]ಮಂ ಕೂಡಿ |

---

[1] ವಿ (ಕ. ಖ.); [2] ಸಾಂ (ಖ.); [3] ವಂ ಮಾ (ಖ.)

ಹರನಿತ್ತ ಪೆಸರ ವಂಶಾವಳಿಯ ಪೆಸರಾಗೆ
ಧರೆಯ ಭಕ್ತಾಳಿಗನಿಮಿತ್ತವುತ್ಸವವಾಗೆ |
ಲಿಂಗಮಂ ತೋಱೆ ಕಣ್ದೆಱೆದು ಸುಖಿಯಾಗುತಂ
ಲಿಂಗಪ್ರಸಾದಮಂ ಕೊಂಡು ಹೊರೆಯೇಱುತಂ |
ಮಾತೆಯ ಮನೋರಾಜ್ಯ ಪಿತನ ಕಣ್ಗಳ ಸೊಂಪು
ಆತುರದೆ ಪಾಡುತ್ತಲಿಹರ ಜೋಗುಳ ಜೊಂಪು |
ದಿಟ್ಟಿ ತೀವಲು ನೋಳ್ಪ ಜನಕೆ ತಾನಭಿಮುಖಂ
ಮುಟ್ಟುವರ ಮುದ್ದು ಮುದ್ದಾಡಿಪರ ನಿಜಸುಖಂ |
ಸೋಗಿಲ ಸುಧಾಕಿರಣವಂಗೈಯ ಮಾಣಿಕಂ
ಸಾಗಿಪರ ಪರಬೊಮ್ಮ ವ[1]ರ್ತಿ[1]ಸುವ ಕೌತುಕಂ |
ನೋಡುವರ ನಯನಸುಧೆ ಸೋಂಕುವರ ಪುಳಕತತಿ
ಬೇಡುವರನರ್ಘ್ಯ[2]ವ[2]ಪ್ಪುವರ ಪುಣ್ಯದ ಸುಗತಿ |
ಅರಳೆಲೆಯ ಸುಮ್ಮಾನಿ ಸುಳಿಗುರುಳ್ಗಳಭಿಮಾನಿ
ಗುರುತರಶಿವಧ್ಯಾನಿ ಮುದ್ದುನಗೆಗಳ ದಾನಿ |
ಅಲರ್ಗಣ್ಗಳಮರ್ದುಗಂ ತೊದಳ್ನುಡಿಯ ತವಕಿಗಂ
ಸಲಿವ ಮಾಗಾಯ ನವನರ್ತನದ ಹಸ[3]ನಿ[3]ಗಂ |
ಬಳೆದೋಳ ಭಾಗ್ಯನಿಧಿ ಹುಲಿಯುಗುರ ಸುಲಭಿಗಂ
ನಳನಳಿಪ ಲಾವಣ್ಯದಿಂದೆಸೆವ ಒಣ್ಣಿಗಂ |
ಹೆಱೆನೊಸಲ ನಾಯಕಂ ಶಿಶುವೇಷದುನ್ನತಂ
[4]ಮೆಱೆದಿಪ್ಪ ಬಾಯ್ದೆರೆಯ ಗರದನುವಲೀಸುತಂ[4] | (?)
[5][ಉ]ಡೆವಣಿಯ ತೊಡವು ಘಲಘಲಿಸುವಂದುಗೆಯಾನೆ
ಮೃಡನ ಸುತನುಂ ದ್ವಿಜತನೂಜನೆಂದುಂ ತಾನೆ |

---

[1] ತ್ಥಿ (ಕ.); [2] ಪೊ (ಕ.); [3] ಲಿ (ಖ.); [4] **ನೆಱೆವಿರ್ಪ ಬಾಯ್ದೆಱೆಯ ಕರದನಾವಲಿಯುತಂ** (ಖ.); [5] ಒ (ಕ.), ಎ (ಖ.)

ತಾನಾಗಿ ಬಾಲಲೀಲೆಯ ಬಸವನೊಪ್ಪಿದಂ
ನಾನಾವಿನೋದನಿಧಿ ಬಸವಣ್ಣನೊಪ್ಪಿದಂ ||

ಬಸವಂ ಪರಸಮಯಕ್ಕು
ಬ್ಬಸವಂ ಮಾಡುತೆ ಸಮಸ್ತ ಶರಣಾವಳಿಗಂ |
ಬಸವಂ ಮಾಡುವೆನೆನುತವೆ
ಒಸವಂ ನಲಿಯಲ್ ಸಮಂತು ಬೆಳೆವುತ್ತಿರ್ದಂ || ೨*

## ಎರಡನೆಯ ಸ್ಥಲ

ಸುರಕುಜದಂಕುರಂ ಶಶಿಕಳಾಕಿರಣಂ ತರುಣಾರ್ಕಮಂಡಲಂ
ಸುರಭಿಯ ಶೀಲವೆಂತವಱವೋಲ್ ಸಯದಿಂ ಸುಕುಮಾರವೃತ್ತಿಯಿಂ-|
ದುರುತರತೇಜದಿಂ ಸುಕೃತಮೂರ್ತಿಯಿಸೊಪ್ಪಿದನೀ ಧರಿತ್ರಿಯೊಳ್
ವರಶಿಶುವಾಗಿ ರಾಜಿಸಿದನಿಂತೊಲವಿಂ ಬಸವಣ್ಣನಾಯಕಂ || ೧*

ಇಂತು ಶುದ್ಧಾಂಗನಾಗಿ [1]ಸುಖಿ[1]ಯಾಗಿ ಧಾರುಣಿಗೆ ಕಾರಣಿಕನಪ್ಪ ಬಸವಂ ಸಂಗಸುಖದಿಂದಿರ್ಪಲ್ಲಿ; ಸೆಲದಲಿ ಮೂಡಿದ ಸ್ವಯಂಭುಲಿಂಗಕ್ಕೆ ನೆಲಂ ತಾಯಾಗಲಱಿಯದೆಂಬಂತೆ ಹರನ ಬೆಸನಂ ಹೊತ್ತು ಪಲವು ಕಾರಣದಿಂ ಮರ್ತ್ಯಲೋಕದೊಳ್ ಪುಟ್ಟಿದ ಗಣೇಶ್ವರನಪ್ಪ ಬಸವ ರಾಜಂಗೆ ತಾಯ್ತಂದೆಗಳಿಲ್ಲೆಂಬುದನಱಿಪುವಂತೆ, ಶಿವಭಕ್ತನುಮಂ ಶಿವ ಭಕ್ತೆಯುಮಂ ಶಿವನಾಜ್ಞೆಯಿಂ ಕೈಲಾಸಕ್ಕೆ ಕೊಂಡೊಯ್ಯೆ;

ಬಸವರಾಜಂ ಪುಸಿಯ ತಾಯ್ತಂದೆಗಳ್ ಪೋದುದಂ ಕಂಡಾ ದರಂಮಿಕ್ಕು ಸಂಸಾರದ ಭಾರವಿಳಿದು ಸಲಿಸಲಿದಾಡಿ, ಶಿವಭಕ್ತಿ ಮುತ್ತಂ ತಿರ್ದ ಮುತ್ತಬ್ಬೆಯ ಪಕ್ಕದೊಳು ಶಿವಪ್ರಸಾದಸಂತುಷ್ಟ+ಹೃದಯ ನಾಗಿ ನಾಲ್ಕೆರಡು ವರುಷಂ ಸುಖದೊಳಿರೆ; ಭಸಿತಕ್ಕೆ ಬಣ್ಣವೇಱುವಂತೆ ರುದ್ರಾಕ್ಷಿಗೆ ಸೌಂದರ್ಯಂ ಸಾರುವಂತೆ ಪಂಚಾಕ್ಷರಿಯ ಮಂತ್ರಕ್ಕೆ ಸಾಮರ್ಥ್ಯಂ ಹೊದ್ದುವಂತೆ ಶಿವಲಿಂಗಮಂ ನವಪೂಜೆಯುಡರ್ಪಂತೆ ಬಾಲ್ಯವಿಮೋಚನವಾಗಿ ಯೌವನವಾಲಿಂಗಿಸೆ, ಪದಿನಾಱು ವತ್ಸರ ದೊಡನೆ ನವಯೌವನಂ ಸಾರ್ದು ಬಸವರಾಜನ ರೂಪು ಸೌಂದರ್ಯ ವೆಂತೆಂದೊಡೆ—

ಶಿವಪ್ರಸಾದವಂ ಹೊತ್ತು ನಿತ್ತರಿಸುವಂ ತಾನೊರ್ಬನೆಂಬುದಂ ತೋರ್ಪಂತೆ ವಾಲ್ಲಿಗೆ ಮೊಲ್ಲೆ ಜಾಜಿ ಕೇತಕಿ ವೊದಲಾದ ಕುಸುಮ ಕುಲಮನಾಂತು ಮೆಱೆವ ಬಟ್ಟೆದುಱುಂಬಿನ, ಮತ್ತಂ ಗಂಗೆಯುಂ ಹೊತ್ತ

---

[1] ಸುರಭಿ (ಖ.); + ಪುಷ್ಟ (ಖ.)

ಹರನೊಳ್ ಪುರುಡಿಸಿ ಶಿರೋಮಧ್ಯದೊಳಿರಿಸಿದ ಕುಂತಳಕಾಳಿಂದೀನದಿ ಹೊಱಸೂಸುಗುಮೆಂದು ಮೇಲಿಕ್ಕಿದ ರುದ್ರಾಕ್ಷಿಯ ಶಿರೋಮಾಲೆಯೆಂಬ ಸುತ್ತೇರಿಯಿಂದೊಸರ್ದ ಕಾಳಿಮಜಲಕಣಂಗಳಂತೆ ನೊಸಲೊಳು ಕುಣಿವ ನೀಳಾಳಕಂಗಳ,ಮತ್ತಂ ನೊಸಲಕಣ್ಣರಸನಿಪ್ಪ ರಾಜಧಾನಿಯೆಂಬ ಭಸಿತ ಸ್ಥಳದ ಭಾಳದೇಶದ ಸೀಮಾರೇಖೆಯಂತೊಪ್ಪುವ ಭ್ರೂಲತೆಗಳ, ಅದಲ್ಲದೆಯುಂ ಜಂಗಮಕೀರ್ತ್ಯವತಂಸವಾಗೆ ವ[1]ರ್ಣ[1]ನೆಗತ್ಯಗ್ಗಳವಾದ ಕರ್ಣಪಾಲಿಕೆಗಳ, ಮತ್ತಂ ಶರಣರ ಮೂರ್ತಿಯ ಕಣ್ಣ ಮಣಿಯೆನಿಪ ಲೋಚನಯು[2]ಗಳ[ದ][2], ಪ್ರಸಾದಪರಿಮಳಮಂ ಘ್ರಾಣಕ್ಕೆ ನಡೆಯಿಸುವ ಸಂಪಗೆಯ ಮುಗುಳ ನಾವೆಯಂತೊಪ್ಪುವ ನಾಸಿಕದ, ಕಂಠಮಾಲೆಯಿಂ ಮೆಱೆವ ಸೌಂದರಗ್ರೀವದ, ಮತ್ತಂ ಭಾಳಸ್ಥಳದ ರುಚಿ[3]ಯಿತ್ತ್ರಟ[3]ದಿಸುದಿರ್ದ ಭಸಿತರಾಶಿಗಳಂತೆಸೆವ ಭುಜಮಂಡಲಂಗಳ, ಶಿವಪೂಜಾಸುಕುಸುಮಿತಲತೆಯಂತೊಪ್ಪುವ ನಳಿತೋಳ್ಗಳ, ಶರಣರ ಚರಣಾಲಿಂಗನಕ್ಕೆಡೆಗೊಟ್ಟು ಮೆಱೆವ ಪೇರುರದ, ಪಂಚಾಕ್ಷರಿಯಿಮ್ಮಡಿಸಿದಂತಿರ್ಪ ಹಸ್ತಾಂಗುಲಿಗಳ, ಪ್ರಸಾದಸ್ಥಲಮೆನಿಸಿದ ಪುಣ್ಯೋದರದ, ಮತ್ತಂ ಪ್ರದಕ್ಷಿಣಕ್ಕೆ ಬಾಲಕಂ ನಲಿನಲಿದಾಡುವ ಗಿಲಿಗಿಲಿಗಂಭಂಗಳಪ್ಪೂರುದಂಡಂಗಳ, ಶರಣಪ[4]ಥ[4]ಕ್ಕಡಿಯಿಡಲ್ ಬಯಸುವಂತೆ ಶಿವನಂ ಬಲಗೊಳಲಿರ್ದ ಪದತಳಂಗಳ,— ಇಂತೊಪ್ಪುವ ರೂಪು ಸೌಂದರ್ಯದಿಂ ಶಿವಪೂಜೆಗೆ ನವಯೌವನವಾದಂತೆ ಮೆಱೆವ ಷೋಡಶಪ್ರಾಯಂ ಪ್ರಜ್ವಳಮೂರ್ತಿಯೆನಿಸಿದ ಬಸವರಾಜಂ ಕಾರಣಿಕಪುರುಷಂ ಶಿವಭಕ್ತಿ[5]ಸ್ವರ್ಣಾಂಗಚ[5]ರಿತಂ ನೆನೆದು ನೋಡಿ ;

ಜನನದ ಬಳಿವಿಡಿದೆಂತಕ್ಕೆ ಒಂದ ಜಪ್ಪನಂ ಶಿವಪೂಜೆಯಲ್ಲಿ ನವೆಯವೇಳ್ಕುಂ. ಇಂತಲ್ಲಲ್ಲಿ ಶಿವಭಕ್ತಿಯುಂ ಕರ್ಮಮುಂ ಎಂದುಮೊಂದಾಗಿರದು—ಎಂದೊಲ್ಲದೆ, ಪರಮವೈರಾಗ್ಯಯುಕ್ತಂ ಶಿವಲಿಂಗಾರ್ಚನಾ

---

1 ರ್ತ (ಖ.) ; 2 ಗಂಗಳ (ಕ.), ಗಳ (ಖ.) ; 3 ಯತ್ತಯ (ಖ.) ; 4 ದ (ಖ.) ;
5 ನ್ಮಾರ್ಗಭ (ಕ.)

[1]ಯತ್ತ[1]ಚಿತ್ತಂ ಕರ್ಮಲತೆಯಂತಿರ್ದ ಜನ್ನಿವಾರಮಂ ಕಳೆದುಬಿಸುಟ್ಟು ಹೋತಿನ ಗಂಟಲಂ ಬಿಗಿವಂತಿರ್ದ ಮೌಂಜಿಯಂ ಪಱಿದುಬಿಸುಟ್ಟು ನವ್ಯದುಕೂಲಮಂ ತೆಗೆದುಟ್ಟು ದಿವ್ಯವಸ್ತ್ರಮಂ ಪೊದೆದು, ಮನೆನೆಳಲಂ ನೆನೆಯದೆ ಅರ್ಥಮಂ ಲೆಕ್ಕಿಸದೆ ವೃತ್ತಿಯಂ ವಿಚಾರಿಸದೆ ಬಂಧುಗಳಂ ಬಗೆಯದೆ ಪುರಜನಮಂ ಪರಿಕಿಸದೆ, ಹರಭಕ್ತಿಯೊಳಾತುರದಿಂ ಬಾಗೆವಾಡಿ[2]ಯ[2]ಂ ಪೊಱಮಟ್ಟು ಪೂರ್ವದಿಶಾಮುಖನಾಗಿ ಕಿಱಿದಂತರಂ ನಡೆದುಬಂದು ;

ಮಲಪ್ರಹರಿಕೃಷ್ಣವೇಣಿಗಳ ಸಂಗಸುಖಮಂ ಪಿಂಗದ ಕೂಡಲಸಂಗಮೇಶ್ವರನಿಪ್ಪ ಕಪ್ಪಡಿಯ ಸಂಗಮವಂ ಪೊಕ್ಕು ಕೇರಿಕೇರಿಯೊಳು ನಡೆತಪ್ಪಾಗಳು, ಶಂಕರಾಲಯಮಂ ಭೋಂಕನೆ ಕಂಡು ಪೂರ್ವಸ್ಮರಣೆ ಕೈಗೂಡಿ, ಕಣ್ ಬಂದಂತೆ ಉಸಿರ್ ಒಂದಂತೆ ಪರಿತಂದು ರಂಗಮಂಟಪದೊಳು ದೊಪ್ಪನೆ ಬಿದ್ದೆಂತಕ್ಕೆದ್ದು ನಿಂದು—ದೇವದೇವ ಅನಾಥನಾಥ ಅನಿಮಿತ್ತಬಂಧುವೆ ತಾಯ್ತಂದೆಬಂಧುಬಳಗವೆ ಕುಲವೆ ಬಲವೆ ಛಲವೆ ತವರೆ ಕಣ್ಣೆ ಗತಿಯೆ ಮತಿಯೆ ಪುಣ್ಯವೆ ಪ್ರಾಣವೆ, ಕಾವುದು ಕಾವು[3][ದೆ]ಂಬಿ—ಎನುತ್ತೆನುತೆ, ಅನುತಾಪವೊಳಗೇಱಿ ಭವದ ಬೇಗೆ ಬೆಂಬತ್ತಿ ಕರಣಂ ಕಾಹೇಱಿ ಹರಣಂ ಕುಕ್ಕುಳಂಗುದಿದು ಗದುಗ[4]ದುಪಾ[4]ಗಿ ಕಣ್ಗಳಂ ಮುಚ್ಚಿ ಸೆರೆಬಿಗಿದು ದಡದಡಿಸಿ ದೊಪ್ಪನೆ ಬಿದ್ದು ಸಂಗ ಶರಣೆನುತೆ ಮೂರ್ಛೆಸೆ, ಕಂಡು ಹರಂ ಕರುಣದಿಂ ನೋಡಿ ಬಸವನ ಚಿತ್ತದೊಳ್ ಪೊಕ್ಕು—ಅಂಜದಿರಂಜದಿರ್ ಮಗನೆ, ಭವದ ಮಾಲೆಯಂ ಹೊದ್ದಲೀಯದೆ ಸಲಹಿದಪೆ[ಂ]. ನಲಂ ಮೆಚ್ಚೆ ಮೆಱೆದಪೆಂ—ಎಂದು ಬೆಸಸಿ ನಿಜಲಿಂಗಕ್ಕೆ ಬಿಜಯಂಗೈವುದುಂ ; ಶಿವನ ದಯೆಗೆ ಚಿತ್ತವಂಕುರಿಸಿ ಬುದ್ಧಿ ಪಲ್ಲವಿಸಿ ಮನಂ ಮುಗುಳೊತ್ತಿ ಕುಳ್ಳಿರ್ದ ಬಸವರಾಜನಂ ಸಂಗಮೇಶ್ವರದೇವರ ಪಾದಮೂಲಪರಿಗ್ರಹವೆನಿಸಿ ಬಳಿದೊತ್ತಾಗಿ ಬಂದ ಸ್ಥಾ[5]ನ[5]ಪತಿಯೆನಿಪ್ಪ ಈಶಾನ್ಯಗುರುಗಳ್ ಕಂಡು, ಈತಂ ಕಾರಣಿಕನಾಗ

---

1 ಯುಕ್ತ (ಕ.) ; 2 ಯಿ (ಖ.) ; 3 ದ (ಕ.ಖ.) ; 4 ದವಿಂ (ಕ.) ; 5 ಣ (ಕ.)

ಲೆವೇಳ್ಕುವೆಂದು ಹತ್ತೆ ಸಾರ್ದು—ಎಲೆ ಭಕ್ತ ನೀನೆಲ್ಲಿಗಂ ಪೋಗಬೇಡ. ಆವುದುಂ ಚಿಂತೆ ಬೇಡ. ಸಂಗಮೇಶ್ವರಂಗೆ ಹೊಸ ಪುಷ್ಪಮಂ ತಿಳಿಯ ಗ್ಘುವಣಿಯಂ ತಂದು ಓಜೆಯಿಂ ಪೂಜಿಗ್ಯೆದು ಪ್ರಸಾದಕಾಯನಾಗಿ ಸುಖದೊಳಿಪ್ಪುದು—ಎನಲಾ ಮಾತಂ ಕೈಕೊಂಡು, ಸಂಗನಬಸವಂ ಬಸವಿದೇವಂ ಕಪ್ಪಡಿಸಂಗಮದೊಳು ಕೂಡಲಸಂಗಮೇಶ್ವರಶ್ರೀಪಾದಕಮಳಮಕರಂದಮಧುಕರಾಯಮಾನನಾಗಿರ್ದಂ. ಅಂತುಮಲ್ಲದೆಯುಂ ||

## ಮೂಱನೆಯ ಸ್ಥಲ

ಬಸವಂ ಜನ್ಮದುರಾಶೆಯಂ ಕಳೆದು ಕರ್ಮಾರಂಭವಂ ನೀಗಿ ಸಂ-
ತಸದಿಂದಂ ಪೊಱಮಟ್ಟು ಬಂ[1][ದು] ಘನನಿರ್ವಾಯಪ್ರಕಾಶೋಜ್ಜ್ವಲ-|
ಪ್ರಸರಪ್ರಸ್ಫುರಿತಪ್ರಮೋದಚರಿತ ಶ್ರೀಸಂಗಪಾದಾಬ್ಜವಾ-
[2]ಸ[ಸು][2]ಪೂಜಾರಸಮಗ್ನಚಿತ್ತನೆನಿಸಿರ್ದಂ ಸತ್ಯಸಾರೋದಯಂ || ೧*

ಇಂತು ಕಪ್ಪಡಿಸಂಗಮದೊಳಿರ್ದು ರಾಗದಿಂ
ಸಂತತಂ ಶಶಿಧರನನರ್ಚಿಪುದ್ಯೋಗದಿಂ |
ಬಸವಂ ಪ್ರಭಾತಸಮಯಕ್ಕೆ ಮು[3]ನ್ನ[3]ವೆ ಎದ್ದು
ಒಸೆದು ಭಸಿತೋದ್ಧೂಳನಂ ಮಾಡುತಂ ಬಾಳ್ದು |
ಸಂಗಂಗೆ ಸಾಷ್ಟಾಂಗದಿಂದಲ್ಲಿ ಪೊಡಮಟ್ಟು
ಪಿಂಗದೀಶಂಗೆ ಭಯಭಕ್ತಿಯಂ ಮುಂದಿಟ್ಟು |
ತ[4]ಕ್ಕೈ[4]ಸಿ ಮುಂಡಾಡಿ ಪುಳಕಿಸುತೆ ಕಂಪಿಸುತೆ
ಬೀಳ್ಕೊಂಡನಕ್ಕಱಿಂ ಲಾಲಿಸುತ್ತಾಲಿಸುತೆ |
ಬಂದಗ್ಘವಣಿಯ ಕಂಬಿಗೆ ನಲಿದು ಮೈಯಿಕ್ಕಿ
ನಿಂದೆತ್ತಿ ಸಂಗ ಶರಣೆನುತೆ ಹೆಗಲೊಳಗಿಕ್ಕಿ |
ತುದಿಕಂಬಿಯೊಳು ಕರಂಡಗೆಯನೊಲಿದಳವಡಿಸಿ
ಸದಮಳಂ ನಡೆದನಭವನನೊಳಗೊಡಂಬಡಿಸಿ |
ನಡೆತರುತೆ ದೂರದೊಳು ಪೂದೋಟಮಂ ಕಂಡು
ಪೊಡಮಟ್ಟು ಕುಣಿಕುಣಿದು ಸಂತಸವನೆಡೆಗೊಂಡು |
ಪರಿಮಳಂ ತೀಡಿದಡೆ ಕಡೆಗೆ ಸಂಗಂಗೆನುತೆ
ಚರಿತದಿಂ ಮುಖವಾಸಮಂ ಸುತ್ತಿ ರಂಜಿಸುತೆ |
ತೋಂಟಮಂ ಪೊಕ್ಕು ಕಂಬಿಯನೊಳ್ಪಿತಱೊಳಿರಿಸಿ
ಎಂಟುಮಡಿ ಹಿಗ್ಗಿ ಹೊರೆಯೇಱುತಂ ಸಡಗರಿಸಿ |

[1] ದ (ಕ. ಖ.); [2] ಸಸ (ಕ.), ಪೊಸ (ಖ.); [3] ಂಚ (ಕ.); [4] ಕ್ಕೃ (ಕ.)

ಅಳಿಯೆಱಗದನಿಲನಲುಗದ ರವಿಕರಂ ಪುಗದ
ಸುಳಿಗೊಂಡು ದಳವೇಱಿ ಹಸುರಳಿದು ಬೆಳುಪುಳಿದ |
ಸುರಾಚಿರಮೆನಿಪ್ಪ ವಿಾಸಲ ಮೊಗ್ಗೆಯಂ ಕೊಂಡು
ಇರವಂತಿಯೊಳ್ ಮೆಱೆವ ಬಿರಿಮುಗುಳ್ಗಳಂ ಕೊಂಡು |
ಸೊಂಪಿನಿಂ ಕಂಪಿ[1]ಡುವ[1] ಸಂಪಗೆಗಳಂ ಕೊಂಡು
[2]ಹೊಂ[2]ಪಸೆವ ಹೊಂಗೇದಗೆಯ ಹೂಗಳಂ ಕೊಂಡು |
ಅದೆ ಮಲ್ಲಿಕಾಕುಟ್ಮಲಂ ಸಂಗಗೆಂದೆಸುತೆ
ಅದೆ ಮಾಲತೀವಿತತಿ [3]ಸಂಪಗೆಯು[3] ನಿಮಗೆಸುತೆ |
ಜಾದಿಯರಳಂ ಕೊಂಡು ಮಲ್ಲಿಗೆಗಳಂ ಕೊಂಡು
ಸೋದಿಸಿದ ಪರಿಮಳದ ಪಡ್ಡಳಿಗಳಂ ಕೊಂಡು |
ಮರುಗದೆಲೆಯಂ ಕೊಂಡು ಸುರಹೊನ್ನೆಯಂ ಕೊಂಡು
ಸರಸಿರುಹಮಂ ಕೊಂಡು ಸೇವಂತಿಯಂ ಕೊಂಡು
ಬದುಕಿದೆಂ ಬದುಕಿದೆನೆನುತ್ತೆ ನದಿಗೈತಂದು
ಸದಮಳಶಿವೈಕ್ಯಚಿತ್ತಂ ಹರುಷದಿಂ [4]ಸಿ[4]ಂದು |
ಸೋದಿಸಿದ ಶೀತೋದಕಂಗಳಂ ತೀವುತಂ
ಆದರಂಪುಗೆ ಸಪುರದಿಂದ ಬಾಸಣಿಸುತಂ |
ಸಹಜಸುಮ್ಮಾನಿ ಸುಖದಿಂದಂ ಬರುತ್ತಿರ್ದ
ಇಹಪರದ ಪುಣ್ಯಪುರುಷಂ ನಡೆದು ಬರುತಿರ್ದ |
ಅತ್ತಿತ್ತ ಚಲಿಸದಚಲಂ ನಡೆದು ಬರುತಿರ್ದ
ಉತ್ತಮೋತ್ತಮ ಭಕ್ತಿಯುಕ್ತನೆಳ್ತರುತಿರ್ದ |
ಒಲವಿಂದ ನಡೆತಂದು ಶಿವನಿಳಯಮಂ ಪೊಕ್ಕು
ಸಲಿಸಲಿದು ನೇಹವಂಕುರಿಸುತಿರೆ ಕೈಮಿಕ್ಕು |
ಲಿಂಗ ಶರಣೆನುತಗ್ಘವಣಿಯನೊಲವಿಂದಿಳಿಪಿ
ಸಂಗಮೇಶ್ವರನ ಹತ್ತಿರೆ ಹದುಳದಿಂದಿಳಿಪಿ | ,

---

1 ಡಿದ (ಖ.); 2 ಹೆ ? ; 3 ಸೌರಭವು (ಖ.); 4 ಖಿ ?

ಬರವಸೆ[1]ಳ[1]ಸಿರ್ದಯ್ಯ ದೇವ ತಳುವಿದೆನೆಂದು
ಉರವಣಿಸಿ ಬರುತಿರ್ದೆ ತಂದೆ ಮುಳಿಯದಿರೆಂದು |
ಎನ್ನಯ್ಯ ಎನ್ನರಸ ಎನ್ನ ಬಂಧುವೆ ಎನುತೆ
ಎನ್ನ ಕಣ್ಣುಂ ಗತಿಯೆ ಮತಿಯೆ ಕರುಣಿಪುದೆನುತೆ |
ಅಲ್ಲಿ ಕತ್ತುರಿಯ ಶ್ರೀಗಂಧಂಗಳಿಂ [2]ಪೊ[2]ರೆದ
ಸಲ್ಲಲಿತದಿರವಂತಿಸಂಪಗೆಗಳಿಂ [2]ಪೊ[2]ರೆದ |
ಸುತಶೀತಳಂಗಳಂ ಪೊಂಗಳಸದೊಳು ತೀವಿ
ಅತಿಶಯಾನಂದಾಶ್ರುವಂ ಕಣ್ಗಳೊಳು ತೀವಿ |
ಕೊಂಡಾಡಿ ಕೊಂಡಾಡಿ ಮಜ್ಜನಕ್ಕೆಱೆವುತಂ
ಮುಂಡಾಡಿ ಮುಂಡಾಡಿ ಸೊಸಲೊಳಚ್ಚೊತ್ತುತಂ |
ಚಂದ್ರಚೂಡಂಗೆ ಸಿರಿಗಂಧಮನಲಂಕರಿಸಿ
ಸಾಂದ್ರಸೌರಭ್ಯಮಯಪುಷ್ಪದಿಂ ಸಿಂಗರಿಸಿ |
ಪೂಜೆಯಂ ನೋಡಿ ಮೆಚ್ಚದೆ ಪೂಜೆಯಂ ಮಾಡಿ
ಓಜೆಗೆಟ್ಟುಱುಹುಗೆಟ್ಟತಿಲ[3]ಲ್ಲೆ[3]ಯಂ ಮಾಡಿ |
ನಯನಂಗಳೊಳು ಪೂಜೆ ಬರೆದಂತೆ ನೋಡುತಂ
ಭಯಭಕ್ತಿಯಿಂ ಪೂಜೆ ಮೆಱೆವಂತೆ ಮಾಡುತಂ |
ಚಿತ್ತದೊಳು ಪೂಜೆಯಚ್ಚೊತ್ತಿದಂತರ್ಚಿಸುತೆ
ಚಿತ್ತದೊಳು ಪೂಜೆ ಪುಟ್ಟಿರ್ದಂತೆ ಈಕ್ಷಿಸುತೆ |
ಧೂಪಧೂಮದ ತಿರುಳ ಪರಿಮಳಮನೊಲಿದಿತ್ತು
ದೀಪದೊಳು ಕಣ್ಬೆಳಗನೆತ್ತಿ ಸುಖಮಂ ಹೊತ್ತು |
ರನ್ನದಡ್ಡಣಿಗೆಗಳ ಮೇಲೆ ಬೆಳಗಂ ಕಱೆವ
ಹೊನ್ನ ಪರಿಯಾಣದೊಳಗಮೃತಾನ್ನಮಂ ಮೆಱೆವ |
ನವಘೃತಂ ನವಶಾಕಪಾಕಂಗಳಂ ಬಡಿಸಿ
ನವಮಧುರರಸವೊಸರ್ವ ಪಕ್ವಾನ್ನಮಂ ಬಡಿಸಿ |

---

[1] ಣಿ (ಕ.) ; [2] ಪೆ (ಖ.) ; [3] ಜ್ಜ (ಖ.)

ನಡುವೆ ಜವನಿಕೆವಿಡಿದು ಪೊಱಗೆ ಕೈಮುಗಿದಿರ್ದು
ಕಡುಲಲ್ಲೆಯಿಂ ಭೀತಿಯಿಂ ಭಕ್ತಿಯಿಂದಿರ್ದು |
ದೇವ ಚೆನ್ನನ ನಿಧಿಯೆ ಆರೋಗಿಸೆಲೆ ಸಂಗ
ದೇವ ಚೋಳನ ಸುಧೆಯೆ ಆರೋಗಿಸೆಲೆ ಸಂಗ |
ಆರೋಗಿಸಯ್ಯ ನಿಜಲಿಂಗ ಸಂಗಮದೇವ,
ಆರೋಗಿಸೈ ಉಮಾರ್ಧಾಂಗ ಸಂಗಮದೇವ |
ಎನ್ನ ಸುಖನಿಧಿಯೆ ಗುಣನಿಧಿಯೆ ಕೂಡಲಸಂಗ
ಎನ್ನ ಭುಜಬಲವೆ ಮನದೊಲವೆ ಕೂಡಲಸಂಗ |
ಎಂದು ಕೊಂಡಾಡುತ್ತ[1][ವಾ]ರೈಸ[2]ಲರ್ಪಿಸುತೆ[2]
ಬಂದು ಜವನಿಕೆಯೊಳಗೆ ನಿಂದು ಮನವಿಕ್ಕುತ್ತೆ |
ಮೃದುಮೃದಂಗಂ ಬಹಳಕಹಳಾರವದ ನಡುವೆ
ಪದೆದು ಪೊಣ್ಮುವ ಶಂಖಭೇರೀರವದ ನಡುವೆ |
ತಿಳಿದಗ್ಘವಣಿಯಿತ್ತು ಕೈಘಟ್ಟಿಯುಮನಿತ್ತು
ಬಳಸಿ ಕಂಪಿ[3]ಡುವ[3] ಕರ್ಪುರದ ವೀಳೆಯವಿತ್ತು |
ಮಂಗಳಾರತಿಯಿತ್ತು ಚವರಸೀಗುರಿಯಿಕ್ಕಿ
ಅಂಗಜಹರಂಗೆ ಮುಕುರಂದೋಱಿ ವ್ಯೆಯಿಕ್ಕಿ |
ನಿಂದಿರ್ದು ಕೈಮುಗಿದು ನೋಡಿ ಕಣ್ಗಳು ತೊರೆಯೆ
ಸಂದಣಿಸಿ ಮೈಯೊಳಗೆ ರೋಮಾಂಚತತಿ ನೆಗೆಯೆ |
ಗುರುಸಂಗ ಶಿವಲಿಂಗ ಸತ್ಯಶರಣರ ಸಂಗ
ವರಸಂಗ ಲಿಂಗ ಶರಣಾಗು ಬಸವನ ಸಂಗ |
ಕರುಣರಸನಿಧಿಘನತರಂಗ ಸಂಗಮದೇವ
ಗಿರಿಸುತೆಯುಸಮುಸುಖಾಲಿಂಗ ಸಂಗಮದೇವ |
ಸುಕುಮಾರಶಶಿಕಳಾಚೂಡ ಕೂಡಲಸಂಗ
ಸಕಲನಿರ್ಮಾಯಿಕಕ್ರೀಡ ಕೂಡಲಸಂಗ |

---

[1] ಲಾ (ಕ. ಖ.); [2] ಲೇಸುತ್ತ (ಖ.); [3] ಡಿದ (ಖ.)

ನಿತ್ಯನಿರ್ಮಳನೆ ನಿಃಕಳನೆ ಕೂಡಲಸಂಗ
ನಿತ್ಯನಿರ್ಭಯನೆ ನಿರುಪಮನೆ ಕೂಡಲಸಂಗ |
ಹೊಗಳ್ವ ವೇದಾಳಿಗತಿಗೂಢ ಕೂಡಲಸಂಗ
ಸೊಗಯಿಸುವ ಘನವೃಷಾರೂಢ ಕೂಡಲಸಂಗ |
ಎನ್ನನತಿಕರುಣದಿಂ ನೋಡು ಕೂಡಲಸಂಗ
ಎನ್ನ ಮನದಕ್ಕಱೊಳು ಕೂಡು ಕೂಡಲಸಂಗ |
ಎನ್ನ ಕಣ್ಣೊಳಗೆ ಪರಿದಾಡು ಕೂಡಲಸಂಗ
ಎನ್ನ ಮನದೊಳಗೆ ಕುಣಿದಾಡು ಕೂಡಲಸಂಗ |
ಎಂದು ಸ್ತುತಿಗೆಯ್ವುತಂ ಸ್ನೇಹರಸದೊಳ್ ಕೂಡಿ
ಇಂದುಧರನೊಳ್ ಸಲುಗೆಯಿಂ ಭಕ್ತಿಯಂ ಬೇಡಿ |
ನಿಂದು ಭೀತಿಯ ತೋಱಿ ತೊದಳಿಂದ ನುಡಿವುತಂ
ಸಂದ ಗದುಗದಿಕೆಯಿಂದಾನಂದವೇಱುತಂ |
ಪುಟವೆದ್ದು ಹೊಂಗುತಂ ದಳವೇಱಿ ಹಿಗ್ಗುತಂ
ಸ[1]ಟ್ಟಿರ್ಪ[1] ನೋಟದಿಂದೋಜೆಯಿಂ ಮಿಱುತಂ |
ಭವದಿಂದ ಹಿಂಗುತಂ ನೆನಹಿಂದ ಹಿಗ್ಗುತಂ
ಬೆವರುತಂ ಬಿಕ್ಕುತಂ ತೇಗುತಂ ತೂಗುತಂ |
ಕ್ರಮವಳಿದು ಸುಳಿದು ಸುಖಿಯಾಗುತಂ [2]ಬೀಗು[2]ತಂ
ನಮಿಸುತಂ ಕಂಪಿಸುತೆ ಮನವೊಲಿದು ಹೊಗಳುತಂ |
ಪುಳಕಂಗಳಿದಿರೇಱೆ ಸುಖಜಲಂ ಕಣ್‌ತೀವೆ
ಬೆಳೆವ ಗದುಗದವಲರೆ ಭಕ್ತಿ ಚಿತ್ತಮನೋವೆ |
ಕಂಪಿಸುತೆ ನಡೆಯುಡುಗೆ ಮನವಕ್ಕಱಿಂ ಕರಗೆ
ಜೊಂಪಿಸುತೆ ತನು ಜೋಲೆ ಸಾತ್ತ್ವಿಕರಸಂ ಮಸಗೆ |
ಮಣಿಮಣಿದು ಕುಣಿಕುಣಿದು ಕೆಲೆಕೆಲೆದು ನಲಿದಾಡಿ
ತಣಿತಣಿದು ತಕ್ಕೈಸಿ ಮಿಕ್ಕು ಮಲೆಮಲೆದಾಡಿ |

---

[1] ಟಯಿಪ್ಪ (ಖ.); [2] ನಮಿಸು (ಖ.)

ಆಡುತಾಡುತ್ತಲ್ಲಿ ಪೊಗಳ್ವುದಂ ನೆಱೆ ಮಱೆದು
ನೋ[1]ಡ[1]ನೋಡುತ್ತಲ್ಲಿ ನೋಟಮಂ ಮಿಗೆ ಮಱೆದು |
ಕಣ್ಮುಚ್ಚಿ ಗದುಗದಿಸಿ ಜೋಲ್ದು ಜೊಂಪಿಸಿ ಬಿದ್ದು
ಉಣ್ಮುವ ಶಿವಾನಂದರಸದ ಪೊನಲೊಳಗದ್ದು |
ಈಸಾಡಿ ಗಂಗಾಧರನ ಚರಣಮಂ ಪಿಡಿದು
ಲೇಸಾಗಿ ಚಿತ್ತದೊಳು ಸಂಗನಂ ನೆಱೆ ಪಿಡಿದು |
ಮನದೊಳಚ್ಚೊತ್ತಿ ಸುಖಮೂರ್ಛೆ[2]ಯೊಳ್[2] ಸಂದಿರ್ದು
ಘನಸುಖದೊಳೆರಡಿಲ್ಲದಂದದಿಂದಿರುತಿರ್ದು |
ನೆನೆದು ಚೇತರಿಸಿ ಮೆಲ್ಲನೆ ಮೆಲ್ಲನೆಚ್ಚತ್ತು
ಅನುಪಮಶಿವೈಕಸುಖಮುಖತೃಪ್ತಿಯಂ ಪೊತ್ತು |
ಕಣ್ದೆಱೆದು ಕುಳ್ಳಿರ್ದು ಸಂಗನಂ [3]ನಱೆ[3] ನೋಡಿ
ಸುಜ್ಞಾನಿಯೊಳರ್ಚನೆಯ ನೇಹಮಂ ಮಾತಾಡಿ |
ಪಾದೋದಕಪ್ರಸಾದಂಗಳಂ ಕೈಕೊಂಡು
ಸಾದರಂ ಸಂಗನೊಲುಮೆಯನೊಚ್ಚತಂಗೊಂಡು |
ದಿನದಿನಕೆ ಘಳಿಗೆಘಳಿಗೆಗೆ ಭಕ್ತಿ ಮಿಗಿಲಾಗೆ
ಅನುದಿನಂ ನೇಹವಿಮ್ಮಡಿಸಿ ನೂರ್ಮಡಿಯಾಗೆ |
ಸಂಗನಾಮಂಗಳಂ ಪುರಜನಕೆ ಕಲಿಸುತಂ
ಸಂಗ ಶರ[4]ಣೆಂದ[4]ವರ ಪದತಳಕ್ಕೆಱಗುತಂ |
ನಡೆವಲ್ಲಿ ನುಡಿವಲ್ಲಿ ಸಂಗ ಶರಣೆಂದೆನುತೆ
ಉಡುವಲ್ಲಿ ಉಂಬಲ್ಲಿ ಸಂಗ ಶರಣೆಂದೆನುತೆ |
ಕೊಡುವಲ್ಲಿ ಕೊಂಬಲ್ಲಿ ಸಂಗ ಶರಣೆಂದೆನುತೆ
ತೊಡುವಲ್ಲಿ ಪೊದೆವಲ್ಲಿ ಸಂಗ ಶರಣೆಂದೆನುತೆ |
ಸಂಗನಾಮದೊಳಚ್ಚುಪಡಿದು ಬೆಳೆವಂತಿರ್ದು
ಅಂಗ[5]ವ[5]ಸಿತಂ ಸಂಗನಂ[6]ತರದೊಳೊಲಿದಿ[6]ರ್ದು |

---

1 ಡ (ಕ.); 2 ಯಿಂ (ಖ.); 3 ನೆಱೆ (ಕ.); 4 ಣೆನುತ (ಖ.); 5 ವೆ (ಕ).
6 ಕರೆವಪೋಲಿ (ಖ.)

ಪೂಗೊಯ್ವು ನಿಮಿಷವದು ಕಲ್ಪಕೋಟಿಗಳಾಗೆ
ರಾಗದಿಂದರ್ಚಿಸುವ ಕಲ್ಪಂ ನಿಮಿಷವಾಗೆ |
ಕೊಡುವಗ್ಘವಣಿಧಾರೆ ಮಳೆಯಾಗೆ ಹೆದಱುತಂ
ನಡುವೆ ಹೂವಡ್ಡಮಿರೆ ನಡುಗಿ ಕೆಲಸಾರ್ಚುತಂ |
ಪೂಜಿಸುವ ಕೈ ಸಟಿಲಿಸುರ್ದಪ್ಪಿ ಕರಗುತಂ
ರಾಜಭೂಷಣನಡಿಗಡಿಗಪ್ಪಿ ಸೆರೆವುತಂ |
ನೋಟ ವಕ್ರತೆಯೆಂದು ಪ್ಯೆಯಿಕ್ಕಲಂಜುತಂ
ಕೂಟಕ್ಕೆ ಪಗೆಯೆಂದು ಮುಟ್ಟಿ ಪಿಡಲಂಜುತಂ |
ಪುಳಕಕ್ಕೆ ಪುರುಡಿಸುತೆ ನೋಂಕಿ ಸುಖಿಯಾಗುತಂ
ಇಳಿವಶ್ರುಜಲಕೆ ಪುರುಡಿಸುತೆ ನಡೆನೋಡುತಂ |
ಗದ್ಗದವನೊಪ್ಪಿರಿಸಿ ಪೊಗ[1][ಳ್] [2]ಲಟಲಟಿಸುವಂ[2]
ಉದ್ಗತಾನಂದಮಂ ನೂಂಕಿ ನೆನೆದುಬ್ಬುವಂ[3] |
ಶಿವಪೂಜೆಯೊಳಗೆ ಪುಟ್ಟಿದ ಸುಧಾಕರನಂತೆ
ಭವಪೂಜೆ ಬಲಿದು ಪುರುಷಾಕಾರವಾದಂತೆ |
ಲಿಂಗ ಜಂಗಮವೊ ಮೇಣ್ ಜಂಗಮವೆ ಲಿಂಗವೋ
ಲಿಂಗಜಂಗಮವೆರಡು ಇಳೆಯೊಳು ವಿಭೇದವೋ |
ಎಂಬಂತೆ ಸಾತ್ತ್ವಿಕಪ್ರಭು ಪೂಜಿಸುತ್ತಮಿರೆ
ಅಂಬಕತ್ರಯನ ಪುತ್ರಂ ಪೂಜಿಸುತ್ತಮಿರೆ |
ಬಸವಣ್ಣನಪ್ರತಿಮನೊಲಿದು ಪೂಜಿಸುತಮಿರೆ
ಬಸವರಾಜಂ ಮಚ್ಚಿ ಪೂಜಿಸುತ್ತಿರಿಪಿರೆ || ·

---

[1] ಳ (ಕ.ಖ.) ; [2] ಲ್ಕಿತಪಿಸುತಂ (ಖ.) ; [3] ಗೆದುಬ್ಬುತಂ (ಖ.)

## ನಾಲ್ಕನೆಯ ಸ್ಥಲ

ಸಂಗಂ ಬಸವನೊ ಬಸವಂ
ಸಂಗನೊ ತಮ್ಮೊರ್ಬ[1]ರೊರ್ಬರಂತೊರ್ಬರೊ[1] ಮೇಣ್ |
ಸಂಗಂ ಬಸವನೊ ಬಸವಂ
ಸಂಗನೊ ಎನಿಪೊಂ[2][ದ][2]ಭೇದಭಾವದೊಳಿರ್ದರ್ || ೧*

ಇಂತು ಸಕಲದೇವವಲ್ಲಭನಪ್ಪ ಸರ್ಪಾಭರಣನಂ ದರ್ಪಕಧ್ವಂಸಿಯಂ ಕೂರ್ಪರ ಕುಲದೈವಮಂ ನೋಳ್ಪರ ಕಣ್ಣ ಮಣಿಯಂ ಬೇಳ್ಪರ ಭಾಗ್ಯನಿಧಿಯಂ ಚಿಂತಿಸುವರ ಚಿಂತಾರತ್ನವೆನಿಪ ಸಂಗಮೇಶ್ವರನ[ಂ] ಕಪ್ಪಡಿಯ ಸಂಗಮದೊಳೊಪ್ಪದಿಂದರ್ಚಿಸುತ್ತಮಿಪ್ಪ ಸಮಯದೊಳು, ಒಂದು ದಿವಸಂ ಬಸವರಾಜಂ ಸಂಧ್ಯಾಸಮಯದವಸರ ಸೌರಭ್ಯಸಂಯುಕ್ತ ಶೀತಳಸಲಿಲ ನೂತನಮಳಯಜ ನವ್ಯಪ್ರಸೂನ ನಾನಾವಿಧಪೂಜಾಸಮರ್ಪಿತ ಷಡುರಸಾಯನನೈವೇದಿತ ಸರ್ವಾಂಗಶರೀರ ಪ್ರ[3][ಣ][3]ತನಾಗಿ ಸಂಗಪ್ರಸಾದಮಂ ಸಾದರಂ ಕೈಕೊಂಡು ರಂಗಮಂಟಪದೊಳು ಸಂಗಮ ಧ್ಯಾನನಿದ್ರಾಮುದ್ರೆಯೊಳಿಪ್ಪಲ್ಲಿ ;

ಕನಸಿನೊಳು : ಬೆಳೆದು ಕವಲಿಱಿದು ನೀಳ್ದ ಪ್ರವಾಳಜಾಳದಂತೆ ಬೆಂಬಳಿವಿಡಿದಿಳಿದ ಕೆಂಜೆಡೆಗಳಿಂ, ಸುತ್ತಿದ ಜಟಾಬಂಧದೊಳಗಣ ಸುರನದಿಯೆಂಬ ಸ[4]ರೋ[ಜಿನೀ][4]ತಟದೊಳಗಿರ್ದ ಬಿಸಕಂದದಂಕುರದಂತಿರ್ದ ಚಂದ್ರಕಳೆಯಿಂ, ವಿದ್ಯುಲ್ಲತಾಗರ್ಭೀಕೃತ ಶಾರದಾಭ್ರವಿಭ್ರಮದಂತೆ ಭಸಿತಂ ಮುಸುಂಕಿದ ಬಿಸುಗಣ್ಣಿಂ ಮೆಱೆವ ಲಲಾಟಪಟ್ಟದಿಂ, ಶೃಂಗಾರದ ತವರ್ಮನೆಯಂತಿರ್ದ ಮುಖಮಂಡಲದಿಂ, ನಯಮಂ ಕಱೆವ ನಾಗಕುಂಡಲದಿಂ, ಹರನೊಳ್ ನೆರೆಯಲ್ ಬಂದ ಕಾಳಿಂದೀನದಿ ಸುರನದಿಗೆ ಸೋಲ್ತಿಳಿದಂತಿರ್ದ ಕೊರಳ ಗರಳದಿಂ, ಕಲ್ಪಕುಜದ ಶಾಖೆಗಳಂತಿರ್ದ

1 ರೊರ್ಬರಿಂತೊರ್ಬರು (ಕ.), ರಿರ್ಬರಂತೊರ್ಬರೊ (ಖ.) ; 2 ದು (ಕ.ಖ.) ;
3 ಣು (ಕ.ಖ.) ; 4 ರೋನದೀ (ಕ.), ರಾನದಿ (ಖ.)

ದಶಭುಜಂಗಳ ತುಱುಗಲಿಂ, ವೇದಂಗಳ್ ತನ್ನ ಕಾಣದಂತೆ ಮುಸುಂಕಿದ ಮಾಯಾಪಟಲವೆನಿಪ ಗಜಚರ್ಮದಿಂ, ಎಳವಿಸಿಲ ಬೆಳಗಂ ತರುಣತರಣಿಗೆ ಕಡಂಗೊಡುವ ಪ್ರಭಾದುಕೂಲದಂತಿರ್ದ ಪುಲಿದೊಗಲಿಂದೊಪ್ಪಿ, ಪಶುಪತಿ ಬಸವನ ಮನದ+ಮೊನೆಯೊಳೊಪ್ಪೆ ಮೂರ್ತಿಗೊಂಡು ;

ಎಲೆ ಮಗನೆ ಬಸವ ಬಸವಣ್ಣ ಬಸವಿದೇವ, ನಿನ್ನಂ ಮಹೀತಳದೊಳು ಮೆಱೆದಪೆವು. ನೀಂ ಬಿಜ್ಜಳರಾಯನಿಪ್ಪ ಮಂಗಳವಾಡಕ್ಕೆ ಪೋಗು—ಎಂಬ ನುಡಿಯೊಡನೆ ಕನಸಿನ ಮಾತು ಮನವನಿಮ್ಮೈಗಂಡು, ನಿದ್ರೆ ತಿಳಿದು ಕಣ್ದೆಱೆದು ಕೆಲಬಲಸಂ ನೋಡಿ ಬೆಚ್ಚಿ ಬೆಗಡುಗೊಂಡು ಅನುತಾಪವೇಱೆ ವಿರಹಂ ಹೊಮ್ಮಿ ಕಣ್ಗೆಟ್ಟಗಲಲಾಱದೆ ರಂಗಮಂಟಪದ ಕಂಭಮಂ ಘಳಿಲನೆ ಹಾಯ್ದು—ದೇವದೇವ ಸಂಗ, ಕಂಡ್ಯೆ. ಕೆಟ್ಟೆಕೆಟ್ಟೆಂ. ತೊಟ್ಟನಿಂತು [1]ಕಣ್ ನೋಡದೆ ಹುಣ್ಣ ನೋಡದೆ[1] ಹೋಗೆಂಬರೆ? ಗಗನದಿಂದಿಳಿವಂಗಾಧಾರಮಾಗುತ್ತೆ ತಪ್ಪುವರೆ? ಕಾಳ್ಕಿಚ್ಚಿನಿಂ ಬೇವಂಗೆ ತಂಪಿನ ಸೋನೆಯು ಮಳೆಯಾಗುತ್ತೆ ಮಾಣ್ಬರೆ? ಇಂತು ನಡುಗಡಲೊಳಾಳುವಂಗೆ ತೆಪ್ಪವಾಗುತ್ತೆ ಪಿಂಗುವರೆ? ನರಕದೊಳಾಳಲೀಯದೆ ಚಂಡಿಕೆವಿಡಿದುದ್ಧರಿಸಲೆಂದಾಳ್ಗೊಂಡ ಗುರುವೆ ಪರಮಬಂಧುವೆ ಪ್ರಾಣವೆ, ಬೆಳುದಿಂಗಳೇಕೆ ಬಿಸುಪೇಕೆ? ಅಮೃತವೇಕೆ ವಿಷವೇಕೆ? ಬೆಳಗೇಕೆ ತಮವೇಕೆ? ನೀನೇಕೆ ಈ ನುಡಿಯೇಕೆ? ಹೊದ್ದಿದರಂ ಹೋಗೆಂಬರೆ? ಸಾರ್ದರಂ ಸೈರಿಸೆಂಬರೆ? ನಂಬಿದವರ ಗೋಣಂ ಕೊಯ್ವರೆ? ಶಿಶುವ ನಿಱುವರೆ? ಪಶುವಂ ಕೊಲುವರೆ? ಎನ್ನಂ ಬಿಡುವರೆ? ಕರುಣಿ ಕರುಣಿ, ಕರುಣಂ ಲೇಸಾಯ್ತು. ಅರ್ಚಿಸಿತಕ್ಕೆ ಫಲವಾಯ್ತು. ಇನ್ನೇನು ಇನ್ನೇನು?—ಎಂದೊಟ್ಟಿ ಒಱಲಿ ಪರಿತಂದು ಸಂಗನಂ ತಕ್ಕೈಸಿ ಪಳವಿಸಿ ಪಲುಂಬಿ ಗೋಳಿಟ್ಟು ಆ[2]ಲಿ[2]ಟ್ಟು ಸಿವದಿಟ್ಟು ಮೊಱೆಯಿಟ್ಟು ಮೂರ್ಛೆ ಸುತ್ತೆಂತಕ್ಕೆಚ್ಚತ್ತು ಮೆಲ್ಲಮೆಲ್ಲನಾಲಿಂಗನಮುಂ ಸಡಿಲ್ಚಿ ನಡೆತಂದು ;

ಮನವಲ್ಲದ ಮನದೊಳಗ್ಘವಣಿಹೂಗಳಂ ಬೇಗಂ ತಂದಂತಂತೆ ಪೂಜೆ

---

+ ಕೊನೆಯ (ಕ.) ; [1] ಕಣ್ಣೊಡದೆ ಹುಣ್ಣೆ ನೊಡನೆ (ಖ.) ; [2] ಳಿ (ಖ.)

ಗೆಯ್ದಾರೋಗಣೆಗಿತ್ತು, ಮೋಹದ ಮುನಿಸು ಮನದೊಳ್ ತೀವಿ ಪ್ರಣಯ ಕಲಹಂ ಬಲಿದು ಪ್ರಸಾದಮನೊಲ್ಲದೆ ಬಸವಂ ಮುಸುಂಕಿಟ್ಟು ಪಶುಪತಿಯ ಪದದ ಕೆಳಗೆ ನಿರ್ವೇಗದಿಂ ಪಟ್ಟಿರ್ದಿರೆ; ರಾತ್ರಿಯೊಳು ನೇತ್ರತ್ರಯಂ ಭಕ್ತನಿರವಂ ನೋಡಿ ಕೊರಗಿ ಮೋಹದ ಮಹಿಮೆ[ಗೆ] ಮರ[1]ವ[1]ಟ್ಟು ಭಕ್ತಿಯ ಭರಕ್ಕೆ ಕೌತುಕಂಗೊಂಡಗಲಲಾಱದ ಮಗಂಗೆ ಮಿಗೆ ಕರುಣಿಸಿ, ಮತ್ತೆ ಕನಸಿನೊಳು ಬಂದು—ಎಲೆ ಮಗನೆ ಎಲೆ ಕಂದ ಎಲೆ ಬಸವ, ನಿನ್ನ ನಗಲಿ ನಾನಿರಲಾಱೆ. ನಿನಗಿನಿತು ನಿರೋಧವೇಕೆ? ಬೇಡಯ್ಯ ಬೇಡೆನ್ನರಸ, ಬೇಡೆನ್ನ ಭಕ್ತನಿಧಿಯೆ. ನಿನ್ನೊಡನೊಡನೆ ಬಿಡದೆ ಬಪ್ಪೆಂ. ನಾಳೆ ಮಧ್ಯಾಹ್ನದೊಳು ಶುದ್ಧಾಂಗನಾಗಿ ಬಂದು ನಂದಿಕೇಶ್ವರನ ಮುಂದೆನ್ನಂ ನೆನೆವುತ್ತಂ ಕುಳ್ಳಿರೆ, ವೃಷಭನ ಮುಖಾಂತರದಿಂದಾವೆ ಬಂದಪೆವು. ಆತ[ಂ] ನಿನಗೆ ಸದ್ಗುರು. ಅಲ್ಲಿಂ ಬಳಿಕ್ಕಂ ಎಮ್ಮನರ್ಚಿಸುತ್ತೆ ಭಕ್ತರ ಬಂಧುವಾಗಿ ಶರಣರ ಪರುಷದ ಕಣಿಯಾಗಿ ನಿತ್ಯಸುಖಿಯಾಗಿ ಪರಸಮಯದ ಗರ್ವಮಂ ನಿಲಿಸಿ ಭಕ್ತರಂ ಗೆಲಿಸಿ ಪ್ರತ್ಯಕ್ಷಂಗಳಂ ತೋಱಿ ಲೌಕಿಕಧರ್ಮಮಂ ಮಿಱಿ ಕಡುನಿಷ್ಠೆಯಂ ಹೇಱಿ ಪರಮಸುಖದಿಂದಿರ್ಪುದು—ಎಂದು ಬೆಸಸಿ ಬಿಜಯಂಗೆಯ್ಯೆ;

ಹರಕರುಣೋದಯಮಾದಂತರುಣೋದಯಮಾಗೆ, ನಿದ್ರೆ ತಿಳಿದೆದ್ದು ಸಾಲ್ಗೊಂಡ ಪುಳಕಂಗಳಂ ಸಂತೈಸಿಕೊಂಡಾನಂದಾಶ್ರು[2]ಗಳಂ[2] ಮುಂದುಗೊಳಿಸಿ ಸಂತಸಮಂ ಸೈತಿಟ್ಟು ಪರಿಕಿಸಿ ನೋಡಿ, ಹರನ ಕರುಣಕ್ಕೆ ಹಾರೈಸಿ + ಭಕ್ತಿ[3]ಭರ[3]ದಿಂ ಭಾರೈಸಿ ಮನದ ಮೊನೆಯಂ ಕೋರೈಸಿ ಬುದ್ಧಿಯೊಳಗಂ [4]ಸಾ[4]ರೈಸಿ ಅಹಂಕಾರಮಂ ತೇರೈಸಿ ಚಿತ್ತದೊಳು ಪೂರೈಸಿ, ಭೋಂಕನೆದ್ದು ಸಂಗಂಗೆ ಪೊಡಮಟ್ಟು ತದನುಜ್ಞೆಯಂ ಕೈಕೊಂಡು, ಪುಣ್ಯದ ಬಿತ್ತಂ ಬೆಳಗುವಂತೆ ದಂತಪಂಕ್ತಿಯಂ ಕಾಂತಿಯಿಟ್ಟು, ಏಕನಿಷ್ಠೆಯ ವಜ್ರಾಂಗಿಯಂ ತೊಡುವಂತೆ ಭ[5]ಸಿತೋ[5]ದ್ಧೂಳ

---

[1] ಏ (ಕ.); [2] ಮಂ (ಕ.); + ಭೋಂಕನೆ (ಕೆನಲೆ—ಖ.)ದ್ದು ಸಂಗಂಗೆ ಪೊಡಮಟ್ಟು (ಕ.ಖ.); [3] ರಸ (ಖ.); [4] ಹಾ (ಖ.); [5] ಸ್ಮವಂ ಉ (ಕ.)

ಸಂ ಮಾಡಿ, ಸುಕೃತಮನಪ್ಪುವಂತೆ ಧವಳವಸ್ತ್ರಮನುಟ್ಟು ಪೊದೆದು, ಪುಣ್ಯದ ಫ[1]ಲಂಗಳ[1]ನಲಂಕರಿಸಿಕೊಂಬಂತೆ ರುದ್ರಾಕ್ಷೆಗಳಂ ತೊಟ್ಟು, ಸಂಗಮೇಶ್ವರಂಗೆ ಮಜ್ಜನ ಪೂಜೆ ಆರೋಗಣೆಗಳನೇಕಚಿತ್ತದೊಳು ಕೈಕೊಳಿಸಿ [2]ಪೊಡಮಟ್ಟು[2] ನಡೆತಂದು—

ರಂಗಮಂಟಪದೊಳು ಕುಳ್ಳಿರ್ದ ದೃಷ್ಟಿವಾರಿಯ ದೃಢಚಿತ್ತಂಗೆ ಕರ್ಣದ್ವಯದ ಕಮನೀಯಂಗೆ ಶೃಂಗಯುಗಳದಭಂಗಂಗೆ ಕಕುದ್ವಳಯದ ಪ್ರಕೃತಿರಹಿತಂಗೆ ವಾಳದಂ[3]ಡದ[3] ಬೋಳೆಯಂಗೆ ಬಸವಣ್ಣಂ ಮೈಯಿಕ್ಕಿ ಕುಳ್ಳಿರ್ದು, ಸುಲಿಪಲ್ಲ ಬೆಳಗುಂ ಕಣ್ಗಳ ಕಾಂತಿಯುಂ ಮುಖದ ಶಾಂತಿಯ ಪೊಳಪುಂ ದುಕೂಲದ ಧವಳಮರೀಚಿಯುಂ ಭಸಿತದ ಪ್ರಭೆಯುಂ ದಟ್ಟೈಸಿ ಮೆಱೆಯೆ ಮುಸುಂಕಿ ಗಂಗೆಯೊಳವಗಾಹಮಿಪ್ಪ ಪುಣ್ಯಪುರುಷನಂತೊಪ್ಪಿ, ಹೃದಯಕಮಳಮಧ್ಯಸ್ಥಿತ ಸಂಗಮೇಶ್ವರ ಧ್ಯಾನಾರೂಢನಾಗಿರ್ಪ ಸಮಯದೊಳು; ಪಶುಪತಿ ವೃಷಭೇಂದ್ರಂಗೆ ಮನದೊಳು ಸೂಚಿಸೆ, ಹಸಾದವೆಂದು ನಂ[4]ದಿಕೇ[4]ಶ್ವರಂ ಸಂಗಮೇಶ್ವರ ಲಿಂಗಮುಂ ಸೆನೆಯೆ ಧ್ಯಾನಂ ಬಲಿದು ಶಿ[5]ವಲಿಂಗ[ಂ][5] ಮೂರ್ತಿಗೊಂಡು ನಂದಿಯ ಹೃದಯಕಮಳಮನೊತ್ತರಿಸಿ ಪೊಱಮಟ್ಟು ಸದ್ಯೋಜಾತಮುಖಮುಂ ಮುಂತಿಟ್ಟೊಳಗೊಳಗೆ ಗಳಗಳನೆ ನಡೆದು ಬರೆ; ಧರ್ಮಮುಖವರಳ್ವಂತೆ ಮುಕ್ತಿಯ ಸೆಜ್ಜೆ [6][ತೆ]ಗೆವಂತೆ ವೃಷಭನ ಮುಖಂ ವಿಕಾಸಮನೆಯ್ದೆ, ಜಿಹ್ವೆಸಿಂಹಾಸನಂಗೊಂಡು ನಂದಿಯ ಮುಖದಿಂದೊಗೆತಪ್ಪ ದಿವ್ಯಲಿಂಗಮುಂ ಸಂಗನಬಸವಂ ಸ್ನೇಹರಸಭರಿತ + ಸಾತ್ತ್ವಿಕದೃಷ್ಟಿಯಿಂದಾಲಿಂಗಿಸುವಂತೆ ನೋಡಿ ನೋಡಿ ಮನದೊಳೋವಿ, ಹೃತ್ಕಮಳದೊಳು ಬೆಳೆದ ಲಿಂಗಕ್ಕೆ ಕರ[7]ಕಮಳ[7]ಮನಾಂತು ನಂದಿಯ ನಾಲಗೆಯ ತುದಿಗಂ ತನ್ನ ಕರಪಲ್ಲವಕಂ ಸಂದಿಲ್ಲದಂತೆ ಕೈಯೊಡ್ಡಿರೆ;

ವೃಷಭರಾಜಂ ಪತಿಯನುಜ್ಞೆಯೊಡನೆ ಬಸವಣ್ಣನ ಹಸ್ತದೊಳು

---

[1] ಲವ (ಖ.); [2] ಪೊಡ (ಱ?) ವಂಟು (ಕ.); [3] ಡೆಯ (ಕ.); [4] ದೀ (ಖ.);
[5] ವ (ಖ.); [6] ದೆ (ಕ.ಖ.); + ನಾಗಿ(ಖ.); [7] ಕ (ಕ.)

ಸಂಗಮೇಶ್ವರ ಲಿಂಗಮಂ ಭೋಂಕನೆ ಬಿಜಯಂಗೆಯ್ಸಿ +, ಮೃದು ಮೃದಂಗಪಟಹಕಹಳಾನಿನಾದ ಸುಮನಸವೃಷ್ಟಿಗಳ ನಡುವೆ ಸುಪುತ್ರನಂ ನಿಜಜನಕಂ ಮೂರ್ಧ್ನಿಘ್ರಾಣಮಂ ಮಾಡುವಂತೆ ವೃಷಭರಾಜಂ ಮುಖ ಮಂಡಲಮಂ ಬಸವನ ಮಸ್ತಕದೊಳಿಟ್ಟು, ಪಂಚಾಕ್ಷರಿಯ ಸಂಚಮನ ಱುಪಿ ಅಮೃತಮಯ ಲಾಲಾಜಳದೊಳಭಿಷೇಕಮನಲಂಕರಿಸಿ ಸತ್ಯೋಪ ದೇಶಮಂ ಶಾಂತಮ[1]ಯ[1]ಂಗೆ ಮಾಡಿ ನೇಹದಿಂ ನೋಡಿ ಕಾರುಣ್ಯಮಂ ನೀಡಿ ಸಾಮರ್ಥ್ಯಮಂ ಕೂಡಿ, ನಂದೀಶ್ವರಂ ಸಂಗಮೇಶ್ವರಂಗೆಱಗಿ ಮುನ್ನಿನಂತೆ ಶಿವಲಿಂಗ ಶ್ರೀಪಾದ ನಿರಂತರಾವಳೋಕನಾಗಿರೆ ;

ಸಂಗನಬಸವಂ ಬಸವಿದೇವಂ ಸದ್ಗುರೂಪದೇಶಲಬ್ಧವಾನ ಕರ ಕಮಳಸ್ಥಿತ ಶಿವಲಿಂಗೋತ್ಪನ್ನ ಹರುಷಪುಳಕಶರೀರ ಸುಖಜಳಬಿಂದು ಸಂದಷ್ಟನಯನಪು[2][ಷ್ಪ]ಸಂಯುತ ಶೈವಸಾಮ್ರಾಜ್ಯಪೂಜ್ಯನಾಗಿ, ರಂಗಮಂಟಪಂ ವಿವಾಹಮಂಟಪವಾಗೆ ಪರಿವಾರದೇವರುಂ ನಿಬ್ಬಣಿಗ ರಾಗೆ ಕರಣಂಗಳೆ ಸುವಾಸಿನಿಯರಾಗೆ ಸಕಳೇಂದ್ರಿಯಂಗಳಾರತಿಯ ನೆತ್ತೆ ಭಕ್ತಿರಸಂ ಕೈದಾರೆಯಾಗೆ ಗುರುಕಾರುಣ್ಯಮುಹೂರ್ತಕ್ಕೆ ಜನನ ಮರಣಂಗಳೆಂಬ ತೆರೆಯರ್ ಪಿಡಿದ ಸಂಸಾರದ ತೆರೆ ಸರಿಯೆ, ನಂದಿಯ ಮುಖದ ಮದವಣಿಗನಂ ಕಂಡು ನಿಷ್ಠೆನೇಮಂಗಳ ಜೀರಗೆಬೆಲ್ಲಂಗಳಂ ತಳಿದು ಪ್ರಾಣೇಶ್ವರನಂ ಪರಮಪ್ರೀತಿಯೊಳಪ್ಪಿಕೊಂಡು, ಸಂಗಂ ಪತಿಯಾಗಿ ಬಸವಂ ಸತಿಯಾಗಿ ಪಂಚಾಕ್ಷರಿಯೆ ಗತಿಯಾಗಿ ಸದ್ಭಕ್ತಿಯೆ ಮತಿಯಾಗಿ, ಸಂಗನಬಸವಂ ಗುರುಲಿಂಗಶ್ರೀಚರಣನಖಮಯೂಖ ಚಂದ್ರಿಕಾಚಕೋರಾಯಮಾನಂ ಶೈವಾನುರಾಗ ಸಂಪತ್ಸುಖತರಂಗಿಣೀ ನಿಮಗ್ನಚಿತ್ತಂ ಮಾಯಾನಿರುಹರಣಂ ನಿರಾವರಣನಿರ್ಮಳನಿಜಾನಂದ ನಿರುಪಾಧಿಕಜ್ಯೋತಿರ್ಲಿಂಗಹರುಷಪುಳಕಿತಶರೀರನಾಗುತಂ ಕಪ್ಪಡಿಯ ಸಂಗಮದೊಳಿರೆಯಿರೆ ||

---

+ ಕೊಂಡು (ಕ.ಖ.) ; [1] ನ ? ; [2] ಷ್ಟ (ಕ.ಖ.)

## ಐದನೆಯ ಸ್ಥಲ

ಬಸವ ಮನೋರಥಂ ನಿನಗೆ ಸಂದುದು ನಿನ್ನನಗಲ್ವ[1]ದಿಲ್ಲ ಕೇಳ್
ವಸುಮತಿಗೈದೆ ಪೂಣ್ದು ಮೆಱೆದಪ್ಪೆವು ಮಂಗಳವಾಡದಲ್ಲಿ ಚಿಂ-|
ತಿಸದೆ ಸಮಸ್ತಜಂಗಮಕೆ ಮಾಡುತೆ ಬಿಜ್ಜಳರಾಯನಿಂದ ವಂ-
ದಿಸಿಕೊಳುತಿರ್ಪುದೆಂದು ಬಸವಂಗುಸಿರ್ದಂ ಗುರು ಸಂಗಮೇಶ್ವರಂ || ೧*

ಇಂತು ಬೆಸಸುತ್ತಮಿರೆ ಬಸವನಾಗಳೆ ಕೇಳ್ದು
ಅಂತಸ್ಥದೊಳು ವಿರಹಚಿಂತೆಯಂ ಮಿಗೆ ತಾಳ್ದು |
ಸಲೆ ಪುತ್ತೆ ಮತ್ತೆ ಪೋಗೆಂದಪಂ ಸಂಗಮಂ
ನಲಿದು ಪೂಜಿಸಲೀಯನಕ್ಕಟಾ ಸಂಗಮಂ |
ಆದಡಂ ಪೋಗಿ ನೋಡುವೆನೆಂದು ಬಗೆಗೊಂಡು
ಆದರಂ ಕುಂದುತ್ತೆ ಚಿಂತೆಯಂ ಕೈಕೊಂಡು |
ಶಿವಭಕ್ತಸಂತತಿಗೆ ಬೆಸಕಯ್ವುಪಾಯಮಂ
ಶಿವಭಕ್ತಿ ನೆಲೆಗೊಳ್ವ ಸಮಸುಖಸಹಾಯಮಂ |
ನೆನೆದು ತನ್ನೊಳಗೊಳಗೆ ತಿಳಿದಂ ಶಿವಧ್ಯಾನಿ
ಅನುಪಮಶಿವೈಕಸಮ್ಯಗ್ಜ್ಞಾನಿ ಕಡುಮಾನಿ | ೧೦
ಅಕ್ಷರಜ್ಞಾನಮುಂಟದನೈದೆ ಮಾಱುವೆಂ
ತ್ರ್ಯಕ್ಷನಣುಗರ್ಗಾದ ಹೊಂಗಳಂ ಬೀಱುವೆಂ |
ಅವರ ಪ್ರಸಾದಮಂ ನಲವಿಂದ ತಾಳುವೆಂ
ಅವರ ಕಾರುಣ್ಯರಸಜಲದೊಳೋಲಾಡುವೆಂ |
ಎಂದಲ್ಲಿ ಗಣಕಕಾಯಕಮಂ ಮನಂಗೊಂಡು
ನಿಂದದಕ್ಕನುಕೂಲವೇಷಮಂ ಕೈಕೊಂಡು |
ಸಂಗಂಗೆ ಬಿನ್ನೈಸಲೆಂದು ಹತ್ತಿರೆ ಬಂದು
ಹಿಂಗಲಾಱದೆ ಕಣ್ಗಳಿಂ ಶೋಕಜಲಬಿಂದು |

---

[1] ಲ್ದು (ಖ.)

ತೆರಳೆ ಸೆರೆ ಬಿಗಿದು ಗದುಗದಿಸಿ ಬಿಕ್ಕುತೆ ಬಿದ್ದು
ಹೊರಳುತ್ತಳುತ್ತಗಲಲಾಱದೊಱಲುತ್ತಿದ್ದು |
ನಿಂದಿರುತ್ತಿಲೆ ಸಂಗ ಹೋಗಿಬಂದಪೆನಯ್ಯ
ತಂದೆ ನಿನ್ನಂ ನಂಬಿ ನಚ್ಚಿ ಹೋದಪೆನಯ್ಯ |
ಅಗಲಲಾಱೆಂ ದೇವದೇವ ಕರುಣಿಪುದೆನುತೆ
ಬಗೆ [1]ಹೆ[1]ಚ್ಚಿ ತನು ಹೆಚ್ಚಿ ನಟ್ಟಂತೆ ನಿಂದಿರುತೆ |
ಮುಂದಿರ್ದ ಬಸವನಂ ಕಂಡು ಸಂಗಂ ಮಱುಗಿ
ಬಂದಪ್ಪಿ ಕಣ್ಣ ನೀರಂ ತೊಡೆದು ಮಿಗೆ ಮಱುಗಿ |
ಬೇಡೆನ್ನ ಕಂದ ನಿನ್ನೊಡನೆ ಬಪ್ಪೆಂ ಬಸವ
ನೋಡು ನಿನ್ನಾಣೆ ನಿ[2]ನ್ನೊಡನೆ[2] ಬಪ್ಪೆಂ ಬಸವ
ನಿನ್ನ ನಗಲಿರಲಾರ್ಪೆನೇ ಬಸವ ಬಸವಣ್ಣ
[3]ನೀನಿ[3]ಂತಳುತ್ತಿಪ್ಪಡೆನಗರಿದು ಬಸವಣ್ಣ |
ಕಂದ ಬೇಡಯ್ಯ ಬೇಡಯ್ಯ ನೇಹದ ನಿಧಿಯೆ
ಹಿಂದುಗೊಂಡೇ ಬಪ್ಪೆನೆನ್ನ ಸುಕೃತದ ಸುಧೆಯೆ |
ನೆನೆಯೆ ಮುಂದಿರ್ದಪೆಂ ಕರೆದೊಡೋ ಎಂದಪೆಂ
ಮನದೊಳಗೆ ಕರದೊಳಗೆ ತನುವಿನೊಳಗಿರ್ದಪೆಂ |
ನಿಂದಲ್ಲಿ ನಿಂದಪೆಂ ನಡೆದಲ್ಲಿ ನಡೆದಪೆಂ
ಬಂದಲ್ಲಿ ಬಂದಪೆಂ ನುಡಿದಲ್ಲಿ ನುಡಿದಪೆಂ |
ಬಿಟ್ಟುದಂ ಬಿಟ್ಟಪೆಂ ಪಿಡಿದುದಂ ಪಿಡಿದಪೆಂ
ನಟ್ಟುದಂ ನಟ್ಟಪೆಂ ಕೇಳ್ದುದಂ ಕೇಳ್ದಪೆಂ |
ಆಡಿದುದನಾಡುವೆಂ ನೋಡಿ[4]ತಂ[4] ನೋಡುವೆಂ
ಮಾಡಿತಂ ಮಾಡುವೆಂ ಕೂಡಿತಂ ಕೂಡುವೆಂ |
ನಡೆಯಯ್ಯ ನಡೆ ಮಗನೆ ನಡೆ [5]ಕಂದ[5] ಬಸವಣ್ಣ
ಪೊಡವಿಗಧಿಪತಿಯಾಗಿ ಬಾಳೆನ್ನ ಬಸವಣ್ಣ |

[1] ವೆ (ಕ.), ಹ? ; [2] ನ್ನಾಣೆ (ಕ.); [3] ನಿನ್ನಿ (ಖ.); [4] ದುದ (ಕ.); [5] ತಂದೆ (ಖ.)

ಎಂದಲ್ಲಿ ಕರುಣಿಸಿದ ಮಾತು ಸಂಬಳವಾಗಿ
ಬಂದನೆಂತೆಂತಕ್ಕೆ ಅಗಲಲಾಱದೆ ರಾಗಿ |
ಸಂಗಮನ ಕರುಣವೇ ತನಗೆ ಬೆಂಬಲವಾಗಿ |
ಸಂಗಮಧ್ಯಾನವೇ ತನಗೆ ಸಂಗಡವಾಗಿ |
ಸಂಗನಾಡಿದ ಮಾತನಾಡಿ ಹಾರೈಸುತಂ
ಸಂಗನಿರ್ದಿರವ ತಾ ನೆನೆದು ನೆಱೆ ಹಿಗ್ಗುತಂ |
ನಡೆವಾಯಸವನಱಿಯದಾನಂದದಿಂ ಮಿಕ್ಕು
ಮೃಡನೆ ಶರಣೆನುತೆ ಮಂಗಳವಾಡಮಂ ಪೊಕ್ಕು
ಪಟ್ಟಣದ ಕೇರಿಕೇರಿಗಳೊಳಗೆ ನಡೆವುತಂ
ಇಟ್ಟಣಿಪ ಸಂಪದಕೆ ಸಂತಸಂಬಡೆವುತಂ |
ಬಂದು ಬಿಜ್ಜಳರಾಯನರಮನೆಗೆ ನಡೆವುತಂ
ಸಂದಣಿಪ ರಾಜಪುತ್ರಾಳಿಯುಂ ನೋಡುತಂ |
ಮತ್ತಗಜಘ[1]ಟೆ[1]ತುರಂಗಾಳಿಯುಂ ನೋಡುತಂ
ಒತ್ತರಿಪ ವೀರಭಟರೊಪ್ಪವಂ ಕಾಣುತಂ |
ಭಾವರಸಪೂರಿತಕವೀಂದ್ರರಂ ನೋಡುತಂ
ನೇವುರದ ಸುಣ್ಣನಿಯ ಸತಿಯರಂ ನೋಡುತಂ |
ಕುಪ್ಪಸದ ಬೀರಣೆಯ ಬಿನ್ನಣದ ಹಸ[2][ನಿ]ಗಂ
ಟೊಪ್ಪಿಗೆಯ ಹೊಱವೇಷದಿಹಪರದ ಲೆಕ್ಕಿಗಂ |
ನಡೆನಡೆದು ಕರಣಸಾಲೆಗೆ ಬಂದು ಕುಳ್ಳಿರ್ದು
ಸಡಗರಿಸಿ ಬ[3]ರೆ[3]ವ ಗಣಕರನೀಕ್ಷಿಸುತ್ತಿರ್ದು |
ಕರಣಸಂಪ್ರತಿಯ ಸಂಪದದ ಗಣಕರ್ಕಳಂ
ಎರೆವ ಲಂಚವನೀವ ದಂಡನಾಥರ್ಕಳಂ |
ಲೆಕ್ಕಕ್ಕೆ ಬಂದಿರ್ಪ ರಾಜಪುತ್ರರ್ಕಳಂ
ಮಿಕ್ಕು ಝುಂಕಿಪ ಸಲುಗೆಯಾಳ್ಗಳೊಪ್ಪಂಗಳಂ |

---

1 ಟ (ಖ.) ; 2 ರಿ (ಕ.), ಲಿ (ಖ.) ; 3 ರು (ಖ.)

ನೋಡುತಂ ಬೆಱಗಾಗುತಲ್ಲಿ ಬಸವಣ್ಣನಿರೆ
ಕೂಡೆ ಲೆಕ್ಕದ ಸಂಭ್ರಮಂ ಸಿರಿಯನುಗುಳುತಿರೆ |
ಬಂದನಲ್ಲಿಗೆ ಮೆಱೆವ ಭಂಡಾರಿ ರಾಗದಿಂ
ಸಂದಣಿಸಿ ಲೆಕ್ಕಮಂ ನೋಡುವುದ್ಯೋಗದಿಂ |
ಕಮ್ಮೆ ಕುಲಪತಿಯೆನಿಪ ಸಿದ್ಧದಂಡಾಧಿಪಂ
ಸುಮ್ಮಾನಿ ಶಿವಭಕ್ತನಚಳಿತಗುಣಾಧಿಪಂ |
ಕುಳ್ಳಿರ್ದು ತನ್ನ ಲೆಕ್ಕಂಗಳಂ ಕೇಳುತಿರೆ
ಒಳ್ಳಿತೆನೆ ಗಣಕರ್ಕಳೆಲ್ಲರುಂ ನೋಡುತಿರೆ |
ಆಯದೊಳು [1]ಬೀಯ[1]ಮಂ ಕಳೆದು ನಿಲವಂ ಕಂಡು
ಆಯತಿಯೊಳೆಲ್ಲರುಂ ಪೇಳಲ್ ಮನಂಗೊಂಡು |
ಐದುಕೋಟಿಯು ಮೇಲೆ ಲಕ್ಕವೈವತ್ತೆಂದು
ಐದೆ ಗಣಕರ್ ತಪ್ಪಿ ಪೇಳೆ ಭರದಿಂದಂದು |
ತಪ್ಪಿದುದನಱಿದನಾ ಬಸವರಾಜಂ ನೋಡ
ಒಪ್ಪುವ ಗಣೇಶ್ವರರ ಗಣಕಾಧಿಪಂ ನೋಡ |
ಭಂಡಾರಿಗಂ ಸ್ಥಿತವನೊಲಿದೊಡಂಬಡಿಸುತಿರೆ
ತಂಡತಂಡದ ಗಣಕತತಿ ತಪ್ಪದೆನುತಮಿರೆ |
ಕಂಡು ಬಸವಂ ಭಕ್ತನೊಡವೆ ಕೆಡಲಾಗದಿದು
ಕಂ[2]ಡು[2]ದಂ ಪೇ[3]ಳ್ವೆನಯ್ಯಾ[3] ಎನುತ್ತಂ ನೆನೆದು |
ಸಿದ್ಧದಂಡಾಧಿಪನನಲ್ಲಿ ಬಸವಂ ನೋಡಿ
ಬುದ್ಧಿ [4]ನಿ[4]ಮಗಿಲ್ಲ ತಪ್ಪಿದುದು ಲೆಕ್ಕಂ ನೋಡಿ |
ಎಂದು ಮತ್ತೊಮ್ಮೆ ನೋಡಿಸುತಲಿಪ್ಪನಿತಕ್ಕೆ
ಸಂದಾಯಮಂ ಬೀಯದೊಳಗೆ ಕಳೆವನಿತಕ್ಕೆ |
ಐದುಕೋಟಿ ಸ್ಥಿತವನೊಳಗೆ ಗಣಕರ್ ಕಂಡು
ಐದೆ ಬಸವಣ್ಣನುಮನೀಕ್ಷಿಸುತೆ ಮನಗೊಂಡು |

---

[1] ಬಿಯ್ಯ (ಖ.); [2] ಡ (ಖ.); [3] ಳ್ದಿನಯ್ಯೋ (ಖ.); [4] ನ (ಖ.)

ಭಂಡಾರಿಯುಂ ಗಣಕರುಂ ಮತ್ತೆ ಮಿಗೆ ನೋಡಿ
ಕೊಂಡಾಡಿ ಬೆಱಗಾಗಿ ಕೌತುಕದೊಳೋಲಾಡಿ |
ಹರೆಯುಮಿದು ಲೆಕ್ಕಮಿದು ಹರನ ಕಾರುಣ್ಯಮಿದು /
ಶರಣಕಾರಣಿಕನೀತಂ [1][ನ]ಮ್ಮ ಭಾಗ್ಯಮಿದು |
ಎಮಗೆ ತಮಗೆಂದು ಬಸವನನೆಲ್ಲರುಂ ಬೇಡಿ
ನಿಮಗಲ್ಲದೆನುತೆ ಭಂಡಾರಿಗಂ ತಾಂ ಕೂಡಿ |
ಕೊಂಡೊಯ್ದು ಬಿಜ್ಜಳನನಲ್ಲಿ ಕಾಣಿಸಿ ದೇವ
ಕಂಡೆನಿಲ್ಲಿಂತಪ್ಪ ಮತಿಯನಿಂತೆಲೆ ದೇವ |
ಲಕ್ಕಮೈವತ್ತನಿಂತೆನಗಾಗುಮಾಡಿದಂ
ಲೆಕ್ಕದೊಳು ಪಡಿಯಿಲ್ಲ ಮತಿಯುಳ್ಳ ಕೋವಿದಂ |
ಎನ್ನ ಭಂಡಾರಕ್ಕೆ ಬರೆಯಿಸುವೆನೀತನಂ
ಉನ್ನತಜ್ಞಾನಯುತಗಣಕವಿಖ್ಯಾತನಂ |
ಎಂದು ಉಡಕೊಡಿಸಿ ಜೀವಿತವನಾಗಳೆ ಮಾಡಿ
ಒಂದು ವರುಷಕ್ಕೆ ನೂಱೊಂದು ಹೊನ್ನಂ ಬೇಡಿ |
ಕೊಡಿಸಿ ಭಂಡಾರಿ ತನ್ನರಮನೆಗೆ ಕೊಂಡೊಯ್ದು
ಕಡು[2]ಮೋ[2]ಹದಿಂದ ಹೊಗಳುತ್ತೆ ಮನ್ನಣೆಗೆಯ್ದು |
ಕುಲವೊಂದೆ ಕುಲವಾಗೆ ಗೋತ್ರವಂತನುವಾಗೆ
ನೆಲೆ ವಿಚಾರಿಸೆ ತನ್ನ ಸಂಬಂಧವೊಂದಾಗೆ |
ಸಿದ್ಧದಂಡಾಧಿಪಂ ಹೆಚ್ಚುತಂ ಹಿಗ್ಗುತಂ
ಸಿದ್ಧಿಯಾಯ್ತೆನಗಖಿಳಪದವಿಯೆಂದುಬ್ಬುತಂ |
ಪತಿಯುಂ ಪಿತಂ ಸುತಂ ಬಸವಣ್ಣ ನೀ[3]ನೆ[3]ನಗೆ
ಗತಿ ಮತಿ ಮಹಾಭಕ್ತಿ ಬಸವಣ್ಣ ನೀ[3]ನೆ[3]ನಗೆ |
ಬದುಕಿದೆಂ ಬದುಕಿದೆನೆನುತ್ತೆ ಹಾರೈಸುತಿರೆ
ಮುದದಿಂದ ಬಂದುದೆನ್ನಯ ಪುಣ್ಯಮೆನುತಮಿರೆ |

---

1 ನಿ (ಕ.ಖ.) ; 2 ಹೊ (ಕ.) ; 3 ವೆ (ಕ.)

ತನ್ನ ಧನಧಾನ್ಯಕ್ಕೆ ಬಸವನೇ ಪತಿಯಾಗಿ
ತನ್ನ ಸಂಪದಭರಕೆ ಬಸವನೇ ಗತಿಯಾಗಿ |
ಬಿಜ್ಜಳಕ್ಷಿತಿಪನರಮನೆಗೆ ಸಿರಿಕ[1]ರ[1]ವಾಗಿ
ಸಜ್ಜನಂ ಬಸವವಾಕ್ಯವೆ ದೈವಕೃತವಾಗಿ
ರತ್ನರಾಶಿಗಳೆಮ್ಮ ಬಸವಿದೇವನ ಮುಂದೆ
ಸೂತ್ನವಸ್ತುಗಳೆಮ್ಮ ಬಸವಿದೇವನ ಮುಂದೆ
ಪಟ್ಟಾವಳಿಗಳೆಮ್ಮ ಬಸವಿದೇವನ ಮುಂದೆ |
ಪಟ್ಟಣಂಗಳ ಸಲಿಕೆ ಬಸವಿದೇವನ ಮುಂದೆ
ಹೊನ್ನ ಹೊಸ ರಾಸಿಗಳ ಬೆಟ್ಟವಾತನ ಮುಂದೆ
ಚೆನ್ನ ಮಿಸುನಿಯ ಘಟ್ಟಿಯೊಟ್ಟಿಲಾತನ ಮುಂದೆ |
ಸರ್ವಾಯಮುಂ ನಮ್ಮ ಬಸವಿದೇವನ ವಶಂ
ಸರ್ವವ್ಯಯಂ ನಮ್ಮ ಬಸವರಾಜನ ವಶಂ |
ಚೋಳದೇಶದ ಹೊನ್ನ ರಾಸಿ ಬಸವನ [3]ಮುಖಂ[3]
ಗೌಳದೇಶದ ಭೂಷಣಾಳಿ ಬಸವನ [3]ಮುಖಂ[3] |
ಬಂಗಾಳ ಲಾಳದೇಶದ ಪಾವುಡಂಗಳುಂ
ವಂಗಂ ಕಳಿಂಗದೇಶದ ಮಹಾಸಿಧಿಗಳುಂ |
ಚೇರ ಕೇರಳ ಪಾಂಡ್ಯ ಪಲ್ಲವದ ಪಾವುಡಂ
ಧಾರುಣಿಯೊಳುಳ್ಳರಸುಗಳ ಮಹಾ ಪಾವುಡಂ |
ಬಸವಬರವಂ ಪಾರ್ದು ನಿಂದಿರ್ಪರಂತಲ್ಲಿ
ಬಸವರಾಜಂ ಬಂದಡೊಪ್ಪಿ[2]ಸುವರಂತ[2]ಲ್ಲಿ |
ಇಂತಪ್ಪ ಸಂಪದಪ್ರಕರದೊಳು ಸುಖಮಿರ್ದು
ಚಿಂತಿಸಿದನಾ ವಸ್ತುಗಳ ನಡುವೆ ಕುಳ್ಳಿರ್ದು |
ಅಯ್ಯಲಾ ಇಂತಪ್ಪ ಸರ್ವಸ್ವಮಂ ಭಕ್ತರ್ಗೆ
ಕಯ್ಯಾರೆ ಕೊಡಲಿಲ್ಲ ಪರಮಶಿವಭಕ್ತರ್ಗೆ |

---

[1] ರು (ಕ.); [2] ತೋಱುವ (ಕ.) [3] ಮುಂದೆ (ಘ.)

ಎಂದೋ ಮಹೇಶರ್ಗೆ ಸೇರಿಸುವೆನಿಂತಿದಂ
ಎಂದೋ ಸುಚಿತ್ತವಾರಾಧಿಸುವೆನಿಂತಿದಂ |
ಕಾಕಭಾಜನವಾಗಿ ಹೋಗುತಿರ್ದಪುದಕಟ
ಲೋಕಾಯತರ್ಗೆ ಸಾರುತ್ತಲಿರ್ದಪುದಕಟ |
ದೇವ ಸಂಗಯ್ಯ ಸಲಿಸೆನ್ನ ಮನದ[1]ಳ್ತಿ[1]ಯಂ
ದೇವಭಕ್ತರ್ಗೀವ ಪುಣ್ಯಮಯ[2]ಭ[2]ಕ್ತಿಯಂ |
ಎಂದನುದಿನಂ ಮನದೊಳನುತಾಪ[3][ವಾ][3]ಗುತಿರೆ
ಇಂದುಧರನಲ್ಲಿ ಸುಖವಂ ಬೇಡಿ ಬಯಸುತಿರೆ |
ಬಂದುದಾ ಸಚಿವಸಿದ್ಧಂಗೆ ಸ್ವರ್ಗದ [4]ಧಾ[4]ಳಿ
ನಿಂದು ದೇಹವನಲೆದುದಲ್ಲಿ ರೋಗದ ಕೇಳಿ |
ರೋಗದಿಂ ಪತ್ತೆಂಟು ದೆವಸಕಸುವೊಱೆಯಾಗಿ
ಬೇಗದಿಂ ರಜತಗಿರಿಗೈದಿದಂ ಸುಖಿಯಾಗಿ |
ಎಯ್ದೆ ಬಸವಂ ಕಂಡು ಬಿಜ್ಜಳಾದೇಶದಿಂ-
ದೊಯ್ದು ಸಂಸ್ಕರಿಸಿ ನಡೆತಂದನು[5][ದ್ವೇ][5]ಗದಿಂ |
ಬಂದು ಬಿಜ್ಜಳಭೂಭುಜನ ಸಭಾಮಧ್ಯದೊಳು
ನಿಂದು ನುಡಿದಂ ಬಸವನಲ್ಲಿ ನಿರ್ವೇಗದೊಳು |
ಸಿದ್ಧದಂಡಾಧಿಪಂ ಹೊಂದಿದನಪು[6][ತ್ರ][6]ಕಂ
ಬುದ್ಧಿಗೊಡುವುದು ಬಾಳ್ಕೆಗೆಂದು ಸೋಪಾಧಿಕಂ |
ಎನೆ ಬಿಜ್ಜಳಂ ನುಡಿದನಲ್ಲಿ ಸಭೆ ಹೊಗಳುತಿರೆ
ಘನಮಹಿಮನೊಡನುಸಿರ್ದನೋಲಗಂ ಕೇಳುತಿರೆ |
ಸರ್ವಭಂಡಾರವೆಲ್ಲಂ ನಿನಗೆ ಬಸವಣ್ಣಾ
ಉರ್ವರೆಯ ಧನವೆಲ್ಲವುಂ ನಿನಗೆ ಬಸವಣ್ಣಾ |
ಎನ್ನ ರಾಜ್ಯದ ಶಿಕ್ಷೆ ರಕ್ಷೆ ನಿನ್ನದು ಬಸವ

---

1 ರ್ಥಿ (ಕ.ಖ); 2 ಯು (ಘ.), ಶ ?; 3 ನಾ (ಕ.ಖ.); 4 ಡಾ (ಕ.);
5 ಬ್ಬೇ (ಕ.ಖ); 6 ತ್ರಿ (ಕ.ಖ.)

ಎನ್ನ ತೇ[1][ಜೋ][1]ಭಿಮಾನಂ ನಿನ್ನದೆಲೆ ಬಸವ|
ನಿನ್ನಂತೆ ಇನ್ನುಂಟೆ ಭಂಡಾರಿ ಬಸವಣ್ಣ
ನಿನ್ನ ಸರಿದೊರೆಯುಂಟೆ ಭಂಡಾರಿ ಬಸವಣ್ಣ|
ನಿನ್ನ ಬರವಿಂದ ಭಂಡಾರವೊದಗಿತು ಬಸವ
ನಿನ್ನ ಬರವಿಂದ ಪ್ರತಾಪವೊದಗಿತು ಬಸವ|
ದೇಶಕ್ಕೆಯುಂ ನೀನೆ ಪಟ್ಟಣಕ್ಕಂ ನೀನೆ
ಕೋಶಕ್ಕೆಯುಂ ನೀನೆ [2]ಸಂಪದ[2]ಕ್ಕಂ ನೀನೆ|
ಆತನಾಳ್ ಕುದುರೆ ಸಂವರಣೆ ನಿನ್ನದು ಬಸವ
ಆತನ ಸಮಸ್ತವಿತ್ತಂ ನಿನ್ನದೆಲೆ ಬಸವ|
ಎಂದು ಪಟ್ಟಾವಳಿಯನಲ್ಲಿ ಉಡುಗೊಱೆಯಿತ್ತು
ತಂದೊಂದು ಪಟ್ಟೆ[3][ಯುಂ] ಬಾಳ್ಗೆಂದು ಪರಸಿತ್ತು[3]|
ಪಟ್ಟದಾಸೆಯ ಮೇಲೆ ಬಸವನಂ ಕುಳ್ಳಿರಿಸಿ
ಇಟ್ಟಣಿಪ ಕಟಕಮಕುಟಾಳಿಯಿಂ ಸಿಂಗರಿಸಿ|
ಸಂದಣಿಪ ಕೆಲಬಲದ ಬೆಳುಗೊಡೆಗಳೊತ್ತರಿಸೆ
ಹಿಂದೆ ನಿಸ್ಸಾಳಭೇರೀರವಂ ಸಂದಣಿಸೆ|
ಮುಂ[4]ದೆ ಕಹಳಾರವಂ ಬಿರುದೆ[4]ತ್ತಿ ಕರೆವುತಿರೆ
ವಂದಿಗಳ್ ಗಾಯಕರ್ ಮಂಗಳಂ ಪಾಡುತಿರೆ|
ಪುರದ ಕೇರಿಗಳೊಳಗೆ ಹರುಷದಿಂ ಮೆಱೆವುತಿರೆ
ತರತರದ ರಾಜವೀಧಿಗಳೊಳಗೆ ಮೆಱೆವುತಿರೆ|
ತಿರಿಗಿ ತನ್ನರಮನೆಯನಾನಂದದಿಂ ಪೊಕ್ಕು
ಪರಮಸುಖದಿಂ ಬಸವರಾಜಂ ಮನಂ ಮಿಕ್ಕು|
ನಲವಿಂದ ಹರಭಕ್ತರಂ ಕರೆಯಿಸುತ್ತಂದು
ಒಲವಿಂದ ಚರಣಸರಸಿಜಮನಪ್ಪುತ್ತಂದು|

---

1 ಜಾ (ಕ.ಖ.); 2 ಬೊಕ್ಕಸ (ಕ.); 3 ಯುಮ ಬಾಳ್ಗೆಂದು ಪಾಡಿಸುತ ಪರಸಿ (ಕ.), ಯುಮಬಾಳ್ಗೆಗೆಂದೊಲಿದಿತ್ತು (ಖ); 4 ದಿರದೆ ಕಹಳೆಗಳು ಬಿರುತೆ (ಕ.)

ಆರಾಧನೆಯನಿತ್ತುವರ ಹರಕೆಯಂ ಹೊತ್ತು
ಮಾರಾರಿ [1]ಶರಣೆನುತೆ[1] ಪರಮಸುಖಮಂ ಹೊತ್ತು |
ಶರಣಚರಣಾಲಿಂಗನಾಸಕ್ತನೊಪ್ಪಿದಂ
ಹರಭಕ್ತಕುಲಕಲ್ಪತರುರೂಪನೊಪ್ಪಿದಂ |
ಬಸವಿದೇವಂ ಸಕಲಸಂಪದದೊಳೊಪ್ಪಿದಂ
ಬಸವಣ್ಣದಂಡನಾಥಂ ಸುಖದೊಳೊಪ್ಪಿದಂ ||

[1] ಪೇಳುತ[ಂ] (ಕ.)

## ಆಱನೆಯ ಸ್ಥಲ

ಬಸವಂ ಸಂಗವರಪ್ರಸಾದ[1]ಸು[1]ಖನಾಗುತ್ತೈ[2]ದಿ[2] ಬಂದಾದ ಸಂ-
ತಸದಿಂ ಮಂಗಳವಾಡದೊಳ್ ಕನಕಭಂಡಾರಾಜ್ಞೆಯುಂ ದಂಡನಾ-|
ಥಸಮಗ್ರಪ್ರಭುವೃತ್ತಿಯುಂ ಸಕಲಸಂಪದ್ವೈಭ[3]ವಾಭಾ[3]ರ್ಯದೊಂ-
ದೆಸವಂ ಬಿಜ್ಜಳರಾಯನಿಂದೆ ಪಡೆದಂ ದಂಡೇಶದಿಕ್ಕುಂಜರಂ || ೧*

ಇಂತು ಪಡೆದು ಸಂಗನಬಸವಂ ಕೆಲವು ದಿನಂಗಳಂ ಕಳೆದು, ಸತ್ಕುಲಸಾದೃಶ್ಯಸುಶೀಲೆಯರಪ್ಪ ಗಂಗಾದೇವಿಮಾಯಿದೇವಿಯರೊಡತಣ ವಿವಾಹಸಂಪದದಿಂ ಸಂ[4]ತ[4]ಸುಖಮಿರ್ದು, ಒಂದು ದೆವಸಂ ಪ್ರಭಾತಸಮಯಸಮುಚಿತ ಪ್ರಕ್ಷಾಳನಕರಚರಣವದನಸರೋರುಹಂ ರುದ್ರಾಕ್ಷಾಲಂಕೃತಸರ್ವಾಂಗಂ ಸಂಗಮೇಶ್ವರಶ್ರೀಪಾ[5]ದ[5]ದರ್ಶನಸ್ಪರ್ಶನನಿತ್ಯನೇಮಸಂಪನ್ನನಾಗಿ ಬಿಜ್ಜಳನರಮನೆಗೆ ಪೊಱಮಟ್ಟು ನಡೆತಪ್ಪಾಗಳು, ಧವಳ[6][ಚ್ಛ][6]ತ್ರದ ಕೆಲಬಲದೊಳು ನೆಲನನುಗ್ಘಡಿಸುವಂಗರಕ್ಷಕರ ಶಿ[7]ಷ್ಟ[7]ರ ಸೇವ್ಯರ ಪಸಾಯ್ತರ ಸಂದಣಿಯ ನಡುವೆ, ಸಾರೆಂಬರಸಾಳ್ಗಳ ತೊಲಗೆಂಬ ಪಡಿ[8]ಯ[8]ಱರ ಮುಂಗುಡಿಯ ಕುರುಳ ಕೊಂತದ ವೀರ[9]ವ[9]ಂದದ ಕೋಳಾಹಳಂ ಬೆರಸಿಬಂದರಮನೆಯಂ ಪೊಕ್ಕು, ತನತನಗೆ ಪೊಡಮಡುವ ರಾಜಪುತ್ರದಂಡನಾಥಮಂಡಳಿಕರ್ಗಭಯಮನೀವುತ್ತೊಡ್ಡೋಲಗದ ನಡುವೆ ರಭಸದಿಂ ಬರ್ಪ ಬಸವರಾಜನ ಶಿವಕಳಾಪರಿಪೂರ್ಣತೇಜ[ಃ] ಪ್ರತಾಪರೂಪಿಂಗೆ ಬಿಜ್ಜಳಂ ಮನದೊಳೆಱಗುತ್ತಮಿರೆ, ತಲದಿಕ್ಕಿದ ಸಮುಗದ್ದುಗೆಯ ಮೇಲೆ ನೃಪನನುಪಚರಿಸುತಂ ಸಂಗನಬಸವಂ ಬಸವಿದೇವಂ ಪ್ರಸನ್ನದಂಡನಾಥಂ ಗಂಭೀರಶಿರೋಮಣಿ ವಿಳಾಸನಿಧಿ ಕುಳ್ಳಿರೆ;

ಬಿಜ್ಜಳಭೂಪನಿಕ್ಕೆಲದೊಳಿಕ್ಕುವ ಸೀಗುರಿಯ ಬೀಸುವ ಚಾಮರದ ವಿಲಾಸಿನಿಯರ ಕಂಕಣದ ಝುಣತ್ಕಾರದ ಸವಿದನಿಗಳ್ಗೆ ಕಿವಿಗೊಡುತ್ತೆ,

---

1 ಮು (ಕ.); 2 ದೆ (ಖ.); 3 ವೈಶ್ವ (ಖ.); 4 ತತ (ಖ.); 5 ದಾ (ಕ.); 6 ಛ (ಕ.ಖ.); 7 ಧ್ಧ (ಖ.); 8 ಯಾ (ಕ.); 9 ವ್ಯ?

ಇತ್ತರದೊಳೊತ್ತರದಿಂ ಕುಳ್ಳಿರ್ದ ಛತ್ತೀಸ ಕುಲದ ರಾಜಪುತ್ರರ್ಕಳ ಸಚಿವರ ದಂಡನಾಥರ ಮಂಡಳೇಶ್ವರರ ಮಹಾಸಾವಂತರ ಬಿರುದ ವಾಹಕರ ರಾಯರಾವುತರ ಗಜಾರೋಹಕರ ಮಾವಂತರ ಮನ್ನೆಯಾಳ್ಗಳ ದಿಟ್ಟಿವಾರಿಯ ಧೀರರ ಪಾಠಕರ ಗಣಿಕೆಯರ ವೀರರ ಹರಿವಾಣದಾಯದ ಲೆಂಕರ ಬಿಂಕದಂಕಕಾಱರ [1]ಮಾ[1]ಸಾಳ್ಗಳ ಬಾರಸಂಕಲೆಯ ತೊಡರ ತೋಟಿಯ ಕಠಾರಾಯಿತರ ಬಾಣಾಯಿತರ ಮಲ್ಲಜಟ್ಟಿಗಳ ಕವಿಗಳ ಗಮಕಿಗಳ ವಾದಿಗಳ ವಾಗ್ಮಿಗಳ ಮುಗ್ಧೆಯರ ವಿದಗ್ಧೆಯರ ಪ್ರೌಢೆಯರ ಮಧ್ಯಮನಾಯಕಿಯರ ಗಾಯಕರ ಚಿತ್ರಕರ ನರ್ತಕರ ವರ್ತಕರ ಮೊತ್ತದೊತ್ತರದ ತಿಂಥಿಣಿಯನೊತ್ತರಿಸಿ ಇಟ್ಟಣಿಸಿದ ಕಟ್ಟಣಕದಾಸ್ಥಾನದೊಳು—ಮಾಳವ ಮಾತಂ ಮಾಣು, ಗೌ[2]ಳ[2] ತೆಱಹುಗೊಡು, ಲಾಳ ವೈಯಿಕ್ಕು, ಗುರ್ಜರ ಬಿನ್ನವಿಸು, ನೇಪಾಳ ಕುಳ್ಳಿರು, ಕಳಿಂಗ ಸಂತಮಿರು, ಬಂಗಾಳ ಹೋ ಹೋ—ಎಂದು ಮಕುಟವರ್ಧನರಂ ಕಟ್ಟಿಗೆಯೆತ್ತಿ ಮಟ್ಟಮಿರಿಸುವ ವೇತ್ರಹಸ್ತ[3]ರಾ[3]ಕ್ರಮಣೆಯ ನಡುವೆ, ದಂಡನಾಥತ್ರಿಣೇತ್ರನೆನಿಪ ಬಸವರಾಜಂ ಸಕಲದೇಶಾಧಿಪತಿಗಳ್ ಕಳುಹಿದ ವಿಳಾಸಿನಿಯರೊಡನೆ ಬಂದ ಪಾವುಡಂಗಳಂ ಕನಕರತ್ನಾಭರಣಜಾಳಮನೊಪ್ಪುಗೊಂಡು ಭಂಡಾರಕ್ಕೆ ತೆಗೆಯಿಸುತ್ತಂ ರಾಜಪುತ್ರರ್ಗೆ ಪಸಾಯವುಂ ಕೊಡಿಸುತ್ತಂ ವೀರಭಟರ್ಗೆ ಜಡಾಯಮಂ ಮಾಡಿಸುತಂ ಮಕುಟವರ್ಧನರಂ ಕಾಣಿಸುತಂ ಬಂದ ಚಾರರಂ ಬೀಳ್ಕೊಡಿಸುತಂ ಸುಖದೊಳಿಪ್ಪಲ್ಲಿ; ಮಧ್ಯಂದಿನ ಸಮಯೋದಿತಡಿಂಡಿಮಧ್ವಾನಂ ನೆಗಳೆ, ಪೇರೋಲಗಮಂ ಪರೆಯವೇಳ್ದೆಲ್ಲರಂ ಕಳುಪಿ, ಬಿಜ್ಜಳರಾಯನೊಡನಾಪ್ತವಚನರಚಿತಮಂತ್ರಾಲೋಚನೆಯಿಂದಿನಿತುಬೇಗಮಿರ್ದು ಅರಮನೆಯಂ ಪೊಱಮಟ್ಟು ತನ್ನ ಮಹಮನೆಗೆ ಬಪ್ಪಲ್ಲಿ;

ತನತನಗೆ ಶಿವಕಾರುಣ್ಯಾಶೈವಸಾಮ್ರಾಜ್ಯಸಂಪದಂ ಕೈಸಾರ್ದುದೆಂಬುತ್ಸವಮಂ ಕೇಳ್ದು ದೇಶದೇಶದ ಪತ್ತೆಂಟುಗಾವುದದ ಮಾಹೇಶ್ವರರ್

---

[1] ಬಾ (ಖ.); [2] ಳಂಗೆ (ಕ.); [3] ದಾ (ಕ.ಖ.)

ಕರುಣಿಸಿ ಬಂದು ಮುಂದೆ ನೆರೆದಿರ್ಪ, ಭೋಂಕನೆ ಕಂಡು ದಂಡಿಗೆಯಿಂದಿಳಿದು, ಬದುಕಿದೆಂ ಬದುಕಿದೆನೆಂದು ಮೆಯ್ಯಿಕ್ಕಿ ನಿಂದು ಕೈಯಂ ಮುಗಿದು, ಕಿಂಕುರ್ವಾಣನೇತ್ರನುಂ ದೈನ್ಯವದನನುಂ ಕಾರ್ಪಣ್ಯಕಾ[1]ಯ[1]ನುಮಾಗಿ ನಿಲ್ಲದೈತಂದೆಲ್ಲರಂ ನಿಜನಿಳಯಮಧ್ಯಸ್ಥಿತಭದ್ರಾಸನಂಗಳೊಳು ಬಿಜಯಂಗೆಯ್ಸಿ ಚರಣಂಗಳಂ ತೊಳೆದು ಪಾದೋದಕಮಂ ತಳೆದು ಸಂ[2]ಗಡ[2]ದೊಳು ಲಿಂಗಾರ್ಚನೆಯಂ ಮಾಡಿ ಪ್ರಸಾದಭರಿತಪ್ರಮೋದಹೃದಯನಾಗುತಂ ; ಅಂದಿನ ದಿನದಲವರಂ ಪಿಂಗಲಾಱದೆ ಪುರಾತನರ ಗೀತಗೋ[3]ಷ್ಠೀ[3]ರಸತರಂಗಿಣಿಯೊಳು ಬೆಳಗಪ್ಪನ್ನವೀಸಾಡಿ ಪರಿಣಾಮದ ತಡಿಗೆ ಸಾರ್ದು ಬಸವರಾಜಂ ಸದ್ಭಕ್ತಿಯುಕ್ತಂ ನಿಂದಿರ್ದು—ದೇವ ದೇವ, ಶಿವರಾತ್ರಿಯ ಸುಖಮಂ ಸವಿಗಂಡೆಂ. ಬಿಡಲಾಱೆನಾಱೆಂ. ಇಂದಿನ ತೆಱದೊಳ್ ಬಂದೆಂದಿಂಗಂ ಕುಂದದೆ ನಿಚ್ಚಶಿವರಾತ್ರಿಯಂ ಮಾಳ್ಪೆನೆಂಬ ನೇಮವಂ ಕೈಕೊಂಡೆಂ, ಕೈಕೊಂಡೆಂ—ಎಂದು ಸಂಗನ ಶರಣರ ಸಮಕ್ಷದೊಳು ಸತ್ಯವಚನಾಲಂಕೃತನೇಮಸಂಪನ್ನನಾಗಿ ಕೂಡಲಸಂಗಲಿಂಗಾರ್ಚನ ನಿತ್ಯಶಿವರಾತ್ರಿವ್ರತ ಸತ್ಯಶರಣಸಮಾರಾಧನ ತಾತ್ಪರ್ಯಚಿತ್ತಂ ಬಿಜ್ಜಳಭೂಪಸೇವೋಪಚರ್ಯಾಭರನಪ್ಪ ಬಸವರಾಜನೋಲಗಿಸುತಿಪ್ಪಲ್ಲಿ ;

ಒಂದು ದಿನವೊಡ್ಡೋಲಗದೊಳೆಡ್ಡಮಾಗಿ ನೃಪನ ಕೆಲದ ಗದ್ದುಗೆಯ ಮೇಲೆ ಬಸವನಿರೆ, ಪಿಂತಣ ಮೆಯ್ಯೊಳು ಬಿಜ್ಜಳನ ಗುರುವಪ್ಪ ನಾರಾಯಣಭಟ್ಟನೊಡನೆ ಮಂಚ್ಯಣಕ್ರಮಿತಂ ಕೂಚಿಗಂ ಪೋಚಿಪೆದ್ದಿಗಂ ಮೊದಲಾದ ವೇದಜಡರ್ ಬಸವನಿರವಿಂಗೆ ಅಸೂಯೆಗೊಳುತ್ತೆ ಕುಳ್ಳಿರೆ, ಮಕುಟಕೋಟಿವರ್ಧನರಿಂದಿಡಿದಿರ್ಪ ಸಭಾಮಧ್ಯಸಿಂಹವಿಷ್ಟರಪ್ರವಿಷ್ಟನಾಗಿ ಕಲಿಯುಗರಾವಣಂ ಪರನೃಪಾಳಗರ್ವಪರ್ವತಕುಲಿಶಂ ಪರಿಪಂಥಿಪನ್ನಗವೈನತೇಯನೆನಿಪ ಬಿಜ್ಜಳಭೂಪನೊಪ್ಪಿಪ್ಪ ಸಮಯದೊಳು ; ಒರ್ವ ಮಾಲೆಗಾಱಂ [4]ಲೀಲೆಯಿಂ[4] ತನ್ನ ಕೈಯಂ ಸುತ್ತಿ ಕೈವಾರಿಸುತ್ತೆ

[1] ಯಕ (ಕ.) ; [2] ಗ (ಖ.) ; [3] ಷ್ಟಿಯೊಳು (ಕ.) ; [4] ಮಾಲೆಯಂ (ಕ.)

ಮುತ್ತಿ ಮುಸುಂಕುವ ಮಧುಕರನಿಕರಂಬೆರಸಿ ತಂದೊಂದು ಸುವರ್ಣಕೇತಕೀಕುಸುಮಮುಮನರಸನ ಕೈಗೆ ನೀಡೆ; ಈ ಹೊಸ ಕುಸುಮವೆಲ್ಲಿಯದೆನುತ್ತರಸಂ ತೆಗೆದುಕೊಂಡು ಸೌರಭದ ಮುದ್ರೆಯನೊಡೆವಂತೆ ಹೂವಂ ಬಿಚ್ಚುತ್ತೊಳಗಣ ಪರಿಮಳದ ತೆನೆಯು ಮುಗ್ಗುಲೊಳೊಗ್ಗಿ ಬೆಳೆದ ಸಣ್ಣಮಪ್ಪ ಸುಣ್ಣೆಸಳನೊಂದಂ ತೆಗೆದು ಬಸವರಾಜನ ಕೈಯೊಳು ಕುಡೆ, ಲೇಸೆನುತ್ತೀಸಿಕೊಂಡು ತನ್ನ ಕಕ್ಷಪುಟದೊಳಗಣ ರನ್ನದ ಸೆಜ್ಜೆಯಂ ತೆಗೆದು ಒಳಗಣ ಸಂಗಮೇಶ್ವರಲಿಂಗಕ್ಕೆ ಕೊಟ್ಟು ಹಿಂಗದಿರ್ಪಲ್ಲಿ; ಶೈವಾಗಮಂಗಳೊಳು ಕೇತಕೀಕುಸುಮಮಂ ಭೂತೇಶ್ವರಂಗೇಱಿಸಲಾಗದೆಂಬುದಂ ಮಾಣ್ದು ಆಗಮಮಂ ಮೀಱಿ ದಂಡನಾಯಕರ್ ಕುಡುವುದರಿದೆಂದು ಕಟಕಿಯಿಂ ಪೇ[1]ಳ್ದು[1] ನಾರಾಯಣಭಟ್ಟಂ ಹೊ[2]ದ್ದಿ[2] ನುಡಿಯೆ, ಬಸವರಾಜಂ ಕೇಳ್ದು ನಸುನಗುತ್ತೆ—ಎಲೆ ಮರುಳು ವಿಪ್ರ, ಎಲೆ ದ್ವಿಜಾಧಮಾ, ಎಲೆ ಕರ್ಮದ ಕಡುಜಡನೆ, ಕೇಳು. ದೇವಂ ಭಕ್ತರ್ ಕೊಟ್ಟಡೆ ಕೈಕೊಳ್ವಂ—ಎಂದು ನುಡಿದ ಮಾತಿಗೆ ಗಡಗಡನೆ ನಡುಗಿ ಬಿಜ್ಜಳನೃಪಂ ಬಸವನ ಮೊಗಮಂ ನೋಡಿ—ದೇವಂ ಕೈಕೊಂಬ[3]ನೆ[3]ಂಬುದಕ್ಕೆ ಕುಱುಹೇನೆಂದು ಕೇಳಲೊಡಂ; ದೇವದೇವ, ಅಮ್ಮಮ್ಮ! ಪರಸಮಯಮೇಘಮಹಾಬಲಂ ದುರ್ಜನಗಿರಿವಜ್ರಘಾತಂ ಭಕ್ತಕುಲಚಕ್ಷುವೆನಿಪ ಬಸವರಾಜಂ ತನ್ನ ಕೆಲಬಲದ ಸಹಸ್ರಮಾಹೇಶ್ವರರ ಕಕ್ಷಪುಟದ ಸೆಜ್ಜೆಗಳನುಪ್ಪರಿ[4]ಸೆ[4], ಸರ್ವಶಿವಲಿಂಗಂಗಳುತ್ತಮಾಂಗದೊಳಂ ಮಂಗಳವಾಡದ ಮಹಾಶಿವಲಿಂಗದಂಘ್ರಿಗಳೊಳಂ ಬಸವಣ್ಣಂ ಕೊಟ್ಟ ಕೇತಕಿಯೆಸಳ ಸದೃಶಮಪ್ಪ [5]ಸು[5]ಣ್ಣೆಸಳ್ಗಳು ತಿಣ್ಣಮಾಗಿ ತೀವಿರೆ; ಬಿಜ್ಜಳಂ ಕಂಡು ಕೇಳ್ದು ದಣ್ಣಾಯಕರ ಪದತಳಕ್ಕೆಱಗಿ ತಪ್ಪುದಂಡಕ್ಕೆ ಪನ್ನಿಚ್ಛಾಸಿರ ಹೊನ್ನಂ ಕೊಟ್ಟು, ಅಂದು ಮೊದಲಾಗಿ ತನ್ನರಮನೆಯ ಭಂಡಾರಿಗಳೆಂಬುದಂ ಮಱೆದು ಸಂಗಮೇಶ್ವರನೆಂದೆ ಕಂಡು ಕೊಂಡಾಡುತಂ ಸಂ[6]ತ[6]ಸುಖದಿಂ ಪಲಕೆಲವು ದಿವಸಮೀ ತೆಱದೊಳಿರೆ;

1 ಳ್ದ (ಕ.ಖ.ಘ.); 2 ಡಿ (ಖ.); 3 ರೆ (ಕ.); 4 ಸಿ (ಕ.ಖ.); 5 ಸ (ಖ.ಗ.ಘ.); 6 ದ (ಖ.)

ಭಂಡಾರಿ ಒಸವಂ ದಂಡನಾಥತ್ರಿಣೇತ್ರಂ ಬಿಜ್ಜಳರಾಯನ ಕಟಕದೊಳು ಸಜ್ಜನಸ್ನೇಹದಿಂ ಶರಣರ್ಗೆರಡಿಲ್ಲದೆ ಬೆಸಕಯ್ವುತಿರ್ದಪನೆಂಬ ಸುಕೃತಾಲಂಕೃತ ಸರ್ವರಜನವಾರ್ತಾವಿಶೇಷ[ಂ] ಜಗದ್ಭರಿತಮಾಗೆ; ಕೇಳ್ದು ಸಕಲದೇಶದ ಶರಣಾವಳಿ ಕರುಣದಿಂ ಹರಭಕ್ತಿಸರೋನಿಧಿ ತೆರೆ ಮಸಗಿ ಮಿಾಱಿ ಬಪ್ಪಂತೆ ಮಂಗಳವಾಡದ ನಾಲ್ಕುಂ ದೆಸೆಯೊಳು ಮೃದುಮೃದಂಗಪಟಹಶಂಖಭೇರೀನಿನಾದಂಗಳೊಡನೆ ಎತ್ತಿದ ವೃಷಭಧ್ವಜಂಗಳ ಸತ್ಯಶರಣರ ಕೇಳಿ[1]ಕೆ[1] ಸಹಿತಂ ಸಂದಣಿಸಿ ನಡೆತಂದ ಮಹಾಮಾಹೇಶ್ವರಕುಲಮನತಿಸ್ನೇಹದಿಂದತಿಹರುಷದಿಂದತಿಭಯದಿಂದತಿಭಕ್ತಿಯಿಂದತಿಶಯಮಾಗಿದಿರ್ಗೊಂಡು—ಬಾಪು ಭಾಗ್ಯವೆ! ನರಜನ್ಮದೊಳು ಬಂದು ಗುರುಕರುಣಮಂ ಪೊತ್ತು ಹರಕಿಂಕರನಾಗಿ ಶರಣರ ಬರವಂ ಪಡೆದೆಂ—ಎಂದುಬ್ಬಿ ಕೊಬ್ಬಿ ಮುಗುಳೊತ್ತಿ ಬಿರಿಬಿರಿದರಳ್ದು ಸಕಲ ಶರಣರಂ ನಿಜನಿಳಯದೊಳು ಬಿಜಯಂಗೆಯ್ಸಿ ಸೈಗೆಡೆದು ನಿಂದು ಕೈಗಳಂ ಮುಗಿದು—ದೇವದೇವ, ನಿಮ್ಮಂ ಕಂಡವನಾವಂ ಲೋಕಕ್ಕೆ ಕಣ್ಣಾಗ? ನಿಮ್ಮಡಿಗಳ ಕೆರ್ಪಂ ಪಿಡಿದವನ ಚರಣವಾರ ಮಕುಟದೊಳು ಬೀಳದು? ದೇವ, ನಿಮ್ಮನಾರಾಧಿಸಿದ ಮನುಜನ ಕೈ ಆರ ಕೈಯಂ ಕೀಳ್ಮಾಡದು? ದೇವ, ನಿಮ್ಮ ಪದಪದ್ಮಪರಾಗಮಂ ತಾಳ್ದನ ಭುಜಂ ಆರ ಭೂಮಿಯಂ ಧರಿಯಿಸದು? ದೇವ, ನಿಮಗೆ ತೊತ್ತಾದಂಗೆ ತೊತ್ತಾಗದ ಲಕ್ಷ್ಮಿಯಾವಳು? ದೇವ, ನಿಮ್ಮಂ ಸ್ತುತಿಗೆಯ್ದ ನಾಲಗೆಗೆ ಮರುಳಾಗದ ಸರಸ್ವತಿಯಾವಳು? ದೇವ, ನಿಮ್ಮಂ ಸಿಂಗರಿಸಿದಂಗಾಳಾಗದ ಚೆಲುವಾವುದು? ನಿಮ್ಮಂ ಪೊಗಳಲೆನ್ನಳವಲ್ಲ. ದೇವ, ನಿಮ್ಮೊಳಂ ಸಂಗನೊಳವಿಭೇದಂ. ನಿಮ್ಮಂ ನೆನೆವುದೆ ಶಿವಚಿಂತೆ, ನೋಡುವುದೆ ದರುಶನಂ, ಮುಟ್ಟಿದುದೆ ಸ್ಪರ್ಶನಂ, ನೀವೆ ಗತಿ, ನೀವೆ ಮತಿ, ನೀವೆ ಪ್ರಾಣಂ—ಎನುತೊಮ್ಮೊಮ್ಮೆ ಬೆವರುತ್ತಂ ಆನಂದಜಳಮಂ ಸೂಸುತಂ ನಡೆಗೆಟ್ಟು ಕುಳ್ಳಿರುತಂ ಗದುಗದಿಸುತಂ ಕಳೆಯೇಱುತಂ ಕರ

[1] ಗೆ (ಖ.)

ಗುತಂ ಕಂಪಿಸುತಂ ಪುಳಕಿಸುತ್ತುಂ, ಶಿವಭಕ್ತಿಸಾ[1]ರಾಯಂ[1] ಜಂಗಮ ಪ್ರಾಣಿ ಸಂಗನಬಸವಂ ಶರಣರ ಸಮೀಪಕಿದಿರ್ವಂದು ಹರುಷದಿಂ ಪರಮಸುಖಿಯಾಗಿರ್ದಂ. ಅಂತುಮಲ್ಲದೆಯುಂ ||

---

[1] ವರ್ಭೌಮಂ (ಖ.ಗ.ಘ.)

## ಏಳನೆಯ ಸ್ಥಲ

ಶರಣಸರೋಜಸಂಕುಳಸಹಸ್ರಕರಂ ಶರಣಾಬ್ಧಿಚಂದ್ರಮಂ
ಶರಣಸಮಾಜಚಾತಕಸುಧಾವರುಷಂ ಶರ[1][ಣರ್ಧಿ][1]ಶಾಸನಂ |
ಶರಣಮಯೂರಮೇಘನಿನದಂ ಮಝುರೇ ಶರಣೈಕಬಾಂಧವಂ
ಶರಣಸುಖಾಕರಂ ಶರಣಸನ್ನಿಹಿತಂ ಬಸವಣ್ಣನೊಪ್ಪಿದಂ || ೧*

ಇಂತು ಶರಣರ ಮುಂದೆ ಬಸವನೊಪ್ಪುತ್ತಿರ್ದು
ಸಂತ[2]ಮಾ[2]ಹೇಶ್ವರರ ಘನಕರುಣವೊದಗಿರ್ದು |
ಎಸೆವ ಪನ್ನಿಚ್ಛಾಸಿರೊಡೆಯರಂ ನೋಡುತಂ
ಬಸವಣ್ಣನಲ್ಲಿ ತಮ್ಮರಸಿಯರ ನೋಡುತಂ |
ಬೋನಮಂ ಸವೆವುದೊಡೆಯರ್ಗೆಂದು ಪೇಳುತಿರೆ
ನಾನಾವಿಧಾನ್ನರಸಪಕ್ವಾನ್ನವಾಗುತಿರೆ |
[3]ಕರವೊ[3]ಪ್ಪೆ ಸಮೆದ ಓಗರದ ರಾಸಿಗಳಲ್ಲಿ
ಹರವರಿಯ ಮಂ[4]ಡ[4]ಗೆಗಳೊಟ್ಟಿಲುಗಳಲ್ಲಲ್ಲಿ |
ಗಾರಿಗೆಯ ಅಳಸುಗಳ ಕುತ್ತಱಿಗಳಲ್ಲಲ್ಲಿ
ಹೂರಿಗೆಯ ಲಡ್ಡುಗೆಯ ಬೆಟ್ಟಂಗಳಲ್ಲಲ್ಲಿ |
ಹಾಲುಂಡೆ ಘೃತಪೂರದಾಲಯವದಲ್ಲಲ್ಲಿ
ಹಾ[5]ಲೋಗರೊ[5]ಡೆ ಸಣ್ಣ ಸೇವಗೆಗಳಲ್ಲಲ್ಲಿ |
ಸರವಳಿಗೆ ಸಣ್ಣ ಸರವಳಿಗೆ ಮಣಿಸರವಳಿಗೆ
ವರಮಧುರ ಪೂಸಣಂಬಂ ಸಮೆದವಂತೊಳಗೆ |
ಮೇಲೋಗರದ ಹಿರಿಯ ರಾಸಿ ಮಸಗಿದವಲ್ಲಿ
ಹಾಲುತುಪ್ಪದ ಕೋಟಿ ಕೊಪ್ಪರಿಗೆಯಂತಲ್ಲಿ |
ಸಮೆದು ಶಿವಲಿಂಗಕ್ಕೆ ಕಂಪಿ[6]ಡು[6]ತ್ತಿರೆ ಕಂಡು
ಅಮಮ ಭಕ್ತೈಕನಿಧಿ ಬಸವಂ ಮನಂಗೊಂಡು |

---

[1] ಣಾರ್ತ್ಥಿ (ಕ.), ಣಾರ್ದಿ (ಖ.), ಣಾರ್ತಿ (ಗ.ಘ.); [2] ತಮ (ಖ.) ; [3] ಹರನೊ (ಖ.)
[4] ಡಿ (ಖ.) ; [5] ಲವುಗುವೊ (ಕ.) ; [6] ಸು (ಕ.)

ಶರಣರ ಪದಂಗಳಂ ಹರುಷದಿಂ ತೊಳೆವುತಂ
ಕರಮೊಸೆದು ಪಾದೋದಕಂಗಳಂ ತಳೆವುತಂ |
ಒದುಕಿದೆಸೆಸುತ್ತವರ್ಜಸೆಗೆ ಎಡೆಮಾಡುತಂ
ಸದಮಳರಸಲ್ಲಲ್ಲಿ ಭಕ್ತಿಯಿಂ ಬೇಡುತಂ |
ಬೇಱೆಬೇಱಗ್ಘವಣಿ ಬೇಱೆ ಪುಷ್ಪದ ಪಂತಿ
ಬೇಱಲ್ಲಿ ಬೇಱೆ ಶಿವಸಿಂಹಾಸನದ ಕಾಂತಿ |
ಒಪ್ಪೆ ತಂಡದಲಿ ಸಿಂಹಾಸನಂಗಳನಿಕ್ಕಿ
ತಪ್ಪದೆಲ್ಲರ್ಗೆ ತರತರದಿಂದ ಮೈಯಿಕ್ಕಿ |
ಪಲ್ಗಿರಿದು ತಗ್ಗಿ ತಲೆಗರೆದು ಬೆರಳಂ ಕಚ್ಚಿ
ಕಾಲ್ಗೆಱಗಿ ಕುಗ್ಗಿ ಕಿಂಕರತೆಯಿಂ ಸೆಱೆ ಪೆಚ್ಚಿ |
ಕೈಗೊಟ್ಟು ತಂದು ಬಜಯುಂಗೆಯ್ಸಿ ಕುಳ್ಳಿರಿಸಿ
ಮೈಗರೆದು ಹರುಷದಿಂ ಸಲವಿಂದ ಹಾರೈಸಿ |
ಎಡೆಮಾಡಿದೆಡೆಗಳೊಳು ಭಕ್ತಿಯಿಂ ಕುಳ್ಳಿರಿಸೆ
ಮೃಡಪೂಜೆಯುತ್ಸಾಹವಲ್ಲಲ್ಲಿ ಸಡಗರಿಸೆ |
ಬಿಲ್ವಪತ್ರದ ಪತ್ರೆಯುಂ ನಮಗೆ ನೀಡೆಂಬ
ಮಲ್ಲಿಗೆಯನಿಲ್ಲಿ ತಾ ಸುರಗಿಯಂ ಸುರಿಯೆಂಬ |
ಮರುಗಮಂ ತಂದಿರಿಸಿರೆಮ್ಮ ದೇವಂಗೆಂಬ
ಜರಿಮುಗುಳ್ಗಳಿರವಂತಿಯುಂ ಮೆಲ್ಲನಿಳುಪೆಂಬ |
ಆಗಮುವದೇಕೆ ಕೇತಕಿಯನೆಮಗೀಯೆಂಬ
ರಾಗದಿಂ ರಾಜಿಸುವೆಸಳ್ಗಳಂ ತೋಱೆಂಬ |
ಸಂಪಗೆಯ ಕುಸುಮಮಂ ತಂದು ಸೃತಿರಿಸೆಂಬ
ಕಂಪುಳ್ಳ ಸೇವಂತಿಯುಂ ತಂದು ತುಱು[1]ಗೆ[1]ಂಬ |
ಜಾದಿಯುಂ ಮೊಲ್ಲೆಯುಂ ಬೆರಸಿ ನೀಡೆಮಗೆಂಬ
ಹೂದುಱುಗಲೇಕೆ ಪಡ್ತಳಿಯನೆಮಗೀಯೆಂಬ |

---

[1] ಬಿ (ಕ.)

ಅಳಿಗಳೆಱಗಿದ ಹೂವನಾವೊಲ್ಲೆವೆಂದೆಂಬ
ಕಳೆ ರವಿಕರಂ ಮುಟ್ಟಿದರಳ್ಗಳಿವು ಬೇಡೆಂಬ |
ಭಸಿತಮಂ ಮೈಯೊಳೊಲಿದುದ್ಧೂಳಿಸೆಂದೆಂಬ
ಎಸೆವಂತಲಂಕರಿಸು ರುದ್ರಾಕ್ಷಿಗಳನೆಂಬ |
ತಣ್ಣಿತಪ್ಪಗ್ಘ[1]ವಣಿಯಂ[1] ಶೋಧಿಸೆಂದೆಂಬ
ಸಣ್ಣೀರಮಪ್ಪ ಸಿರಿಗಂಧಮಂ ಬೆರಸೆಂಬ |
ಹಿಮಜಲಕೆ ಸಂಪಗೆಯ ಮುಗುಳ್ಗಳಂ ಕೂಡೆಂಬ
ವಿಮಲವಪ್ಪಗ್ಘಣಿಯನೊಲಿದು ಬಾಸಣಿಸೆಂಬ |
ಬಾವನ್ನವೇ ಸಾಲ್ವುದೆಮ್ಮ ದೇವರಿಗೆಂಬ
ಆವಗಂ ಬೇಳ್ಪ ಪಚ್ಚೆಯನೀವುದೆಮಗೆಂಬ |
ನಂದವರ್ತಿಯನೊಲಿವನೆಮ್ಮ ಶಂಕರನೆಂಬ
ಮಂದೈಪ ಕಂಪೆ ಸಾಲ್ವುದು ಶಶಿಧರಂಗೆಂಬ |
ಧೂಪಮಂ ತಮ್ಮ ದೇವಂಗೆ ಮುನ್ನೀಯೆಂಬ
ದೀಪಮಂ ಬಳಿಕೆತ್ತಿರೇ ದಶಭುಜಂಗೆಂಬ |

ಶರಣರಂ ನೋಡುತಂ ಹರುಷದಿಂ ಹಿಗ್ಗುತಂ
ಪರಿಪರಿಯ ಹೊಸಪರಿಯ ಪುಳಕದಿಂದರಳುತಂ |
ಬಸವರಾಜಂ ನೋಡಿ ಬದುಕಿದೆನೆನುತ್ತಲ್ಲಿ
ಬಸವಿದೇವಂ ಕಂಡು ಹೆಚ್ಚಿ ಬಾಳುತ್ತಲ್ಲಿ |
ಜಲಚರಂ ಸೋಂಕದಗ್ಘವಣಿ ಬೇಕೆಂದಡಂ
ಸಲೆ ವತ್ಸನುಣ್ಣದ ಪಯಂ ನೇಮವೆಂದಡಂ |
ದೇವಲೋಕದ ಕಮಲವೆಮಗೆ ಬೇಕೆಂದಡಂ
ದೇವಲೋಕದ ಮರುಗವಂ ಕುಡುವುದೆಂದಡಂ |
ಕರಿಯ ಮಲ್ಲಿಗೆಯನೆವ್ಮಿೀಶ್ವರಂಗೆಂದಡಂ
ಕರವೀರದರಳೆಮಗೆ ನೇಮ ತಾನೆಂದಡಂ |

---

[1] ಣಿಗಳಂ (ಕ.)

ಕಾಮದಹನದ ವಿಭೂತಿಯು ಸೇಮವೆಂದಡಂ
ಹೇಮದಕ್ಷತೆ ಸೇಸೆವೆಮಗೆ ಸಲಿಸೆಂದಡಂ |
ಆರತಿಗೆ ಪಚ್ಚಕರ್ಪುರವನೀಯೆಂದಡಂ
ವಾರಿಜದ ತಂತುವಿನ ಬತ್ತಿ ಬೇಕೆಂದಡಂ |
ಏಕಮುಖರುದ್ರಾಕ್ಷಿ ಜಪಕೆ ಬೇಕೆಂದಡಂ
ಕೈಕೊಳಿಸುವಡೆ ರನ್ನದಿಂಡೆ ಬೇಕೆಂದಡಂ |
ಗಜಮಸ್ತಕದ ಮುತ್ತು ರಂಗವಲಿಗೆಂದಡಂ
ಭುಜಗನ ಫಣಾಮಣಿ ನಿವಾಳಿ ಬೇಕೆಂದಡಂ |
ಕೋಡಿದನೆ ಕೊಂಕಿದನೆ ಕಂದಿದನೆ ಕುಂದಿದನೆ
ಬಾಡಿದನೆ ಬಳ್ಕಿದನೆ ಬೆದಱಿದನೆ ಬೆಚ್ಚಿದನೆ |
ಸಂಗನಂ ನೆನೆದು ಸುಖದಿಂದಲೀವುತ್ತಿರ್ದ
ಅಂಗಜಾರಿಯು ಕರುಣದಿಂದಲೀವುತ್ತಿರ್ದ |
ಇಲ್ಲೆನ್ನದಚಳನಪ್ರತಿಮನೀವುತ್ತಿರ್ದ
ಎಲ್ಲಾ ಗಣಂಗಳ್ಗೆ ಛಲದೊಳೀವುತ್ತಿರ್ದ |
    ಈ ತೆಱದೊಳೀವುತಿರೆ ಶರಣತತಿ ಹೆಚ್ಚುತಂ
ಓತು ಕೊಂಡಾಡುತಂ [1]ಹಾ[1]ಡುತಂ ಹರಸುತಂ |
ಹೊಸ ಹೊಸ ಪರಿಯ ಸಿರಿಯ ನೇಮದಚಲರ್ ಕೆಲರು
ಕುಸುಮವಂ ಕೊಡದೆ ಪರಿಮಳವನೀವರ್ ಕೆಲರು |
ಮಜ್ಜನಕ್ಕೆಱೆವುತಂ ಕರಗುತಿರ್ಪರ್ ಕೆಲರು
ಉಜ್ಜ್ವಳಿಪ ಲಿಂಗಮಂ ನೋಡುತಿರ್ಪರ್ ಕೆಲರು |
ಪೂಜೆಯಂ ಮಾಡಿ ಪು[2]ಟ[2]ವೆದ್ದಾಡುವರ್ ಕೆಲರು
ಪೂಜಿಸುತೆ ಕಂಪಿಸುತೆ ಕೈಮಱೆವವರ್ ಕೆಲರು |
ಹೂವನೀಕ್ಷಿಸುತೆ ಹೊರೆಯೇಱುತಿಪ್ಪರ್ ಕೆಲರು
ದೇವನಂ ನೋಡಿ ದಳವೇಱುತಿಪ್ಪರ್ ಕೆಲರು |

---

[1] ಆ (ಖ.) ; [2] ರು (ಖ.)

ಶಿವಲಿಂಗಮುಮಂ ಮುಟ್ಟಿ [1]ಮಱೆವುತಿಪ್ಪರ್[1] ಕೆಲರು
ತವಕದಿಂ ಸ್ತುತಿಯಿಸುತೆ ಗದಗದಿಸುವರ್ ಕೆಲರು |
ಹಾಡಲೆಂದಸುಗೆಯ್ದು ನೋಡುತಿಪ್ಪರ್ ಕೆಲರು
ನೋಡಲೆಂದಸುಗೆಯ್ದು ಹಾಡುತಿಪ್ಪರ್ ಕೆಲರು |
ಆಡುತಾಡುತೆ ಪಾಱಿ ಮಸಗಿ ಕುಣಿವರ್ ಕೆಲರು
ನೋಡಿನೋಡುತ್ತಲೆವೆಯಿಕ್ಕದಿಪ್ಪರ್ ಕೆಲರು |
ಶಿವಶಬ್ದಮಂ ಕೇಳ್ದು ಪುಳಕಿಸುವವರ್ ಕೆಲರು
ಶಿವನೊಡನೆ ಮುನಿಮುನಿದು ಜಿನುಗುತಿಪ್ಪರ್ ಕೆಲರು |
ಧೂಪಮಂ ಮಱೆದಾರತಿಯನೆತ್ತುವರ್ ಕೆಲರು
ದೀಪಮಂ ಧೂಪಮೆಂದರ್ಚಿಸುವವರ್ ಕೆಲರು |
ಇಂತು ಶಿವಲಿಂಗಪೂಜಾಸಂಭ್ರಮಂ ನೆಗಳೆ
ಸಂತತಂ ಬಸವರಾಜಂ ಹಿಗ್ಗುತಂ ಹೊಗಳೆ |
ಆಗಳೊಗೆದವು ಘಂಟೆಗಳ ಘಣಘಣತ್ಕಾರ
ಆಗಳುಣ್ಮಿದವು [2]ಕಾ[2]ಸಾಳದ ಘಳತ್ಕಾರ |
ಅಲ್ಲಿ ಮುರಜದ ಮದದ ಕಹಳೆಗಳ ದನಿಯೊಳಗೆ
ಅಲ್ಲಿ [3]ಯಾ[3]ವುಜದ ಶಂಖದ ಘನಧ್ವನಿಯೊಳಗೆ |
ಭಕ್ತಿಸ್ವಯಂವರದ ಪುಣ್ಯವೀಥಿಯ ತೆಱದಿ
ಮುಕ್ತಿಸ್ವಯಂವರದ ಶಿವಯೋಗಿಗಳ ತೆಱದಿ |
ಇರೆ ಬೇಱೆ ಬೇಱೆ ಪರಿಪರಿಯ ಪರಿಯಾಣದಿಂ
ಸರಸಪಕ್ವಾನ್ನಘೃತಮುಮಂ ಬಡಿಸಿ ರಾಗದಿಂ |
ನವಸುಧಾಕಿರಣಜಯವೆನಿಸುವೋಗರವಿಕ್ಕಿ
ಸವಿಗೆ ಸವಿಯೆನಿಪ ಮೇಲೋಗರಂಗಳನಿಕ್ಕಿ |
ರಾಗದಿಂದಣ್ಣೆವಾಲ್ ಸಕ್ಕರೆಗಳಂ ಬಡಿಸಿ
ಬೇಗದಿಂ ಕೆನೆವೊಸರುಮಜ್ಜಿಗೆಗಳಂ ಬಡಿಸಿ |

---

[1] **ಮೆಱೆವರ್** (ಖ.); [2] ಕೈ (ಖ.); [3] ವಾ (ಕ,ಖ.)

ಚಂದ್ರಮಂಡಲದೊಳಮೃತವನಿಕ್ಕಿ ಕೊಡುವಂತೆ
ಸಾಂದ್ರರುಚಿಗೊಡುವ ಪರಿಯಾಣಂಗಳುಮಸಿಂತೆ|
ನೀಡುತಿರೆ ಪರಿಚಾರಕಪ್ರಕರವಲ್ಲಲ್ಲಿ
ಕೂಡೆ ಶರಣಪ್ರಚಂ [1]ಹಾರೈಸಲಲ್ಲ[1]ಲ್ಲಿ|
ಬಸವರಾಜಂ ನಲಿದು ಪುಷ್ಪಾಂಜಲಿಯನೀಯೆ
ಎಸೆಯೆ ಶಿವಭಕ್ತಕುಲವೆಲ್ಲ ಪರಕೆಯನೀಯೆ|
ಆರೈಸಲಿಕ್ಕುತ್ತುಘೇ ಚಾಂಗು [2]ಬೊಲ್ಲೆ[2]ಂದು
ಮಾರಾರಿಯಂ ಶಂಭುವಂ ಬಣ್ಣಿಸುತ್ತೆಂದು|
ತಮತಮಗೆ ನೇಮದಿಂದರ್ಪಿಸಲ್ ತೊಡಗಿದರು
ಶಿವಲಿಂಗಮೂರ್ತಿಯಂ ಬೋಳೈಸತೊಡಗಿದರು|
ಹಾಲುಂಡೆ ಮೃದುವಾದವೆಲೆ ಲಿಂಗ ಕೊಳ್ಳೆಂದು
ಹಾಲನಾರೈಸು ಮತ್ತಾವುದುಂ ಬೇಡೆಂದು|
ದೇವ ಬೀಸುಂಬೂರಿಗೆಯನೊಮ್ಮೆ ಸವಿಯಯ್ಯ
ದೇವ ಪರಡಿಯ ಪಾಯಸವನುಣ್ಣು ದಮ್ಮಯ್ಯ|
ದೇವ ಮೆಲ್ಲನೆ ಬಳಲ್ದಿರಲೆ ತಂದೆ ಎಂದೆನುತೆ
ದೇವ ಇನ್ನೊಂದೆ ತುತ್ತೆನ್ನಾಣೆ ಕೊಳ್ಳೆನುತೆ|
ಕೊಟ್ಟ ಪಕ್ವಾನ್ನಮಂ ಮೆಲಲೊಲ್ಲೆಯೇಕೆಂಬ
ದೃಷ್ಟಿಯಾಯ್ತೆಲೆಲೆ ಉಪ್ಪಾರತಿಯನೆತ್ತೆಂಬ|
ಪಸಿದನ್ನೆ ಶಿವಲಿಂಗನುಣಲಾಱನೆಂದೆಂಬ
ಮೊಸರೋಗರವೆ ಸಾಲ್ವುದೆಮ್ಮ ದೇವಂಗೆಂಬ|
ಕೆನೆಮೊಸರ್ ನಿಸಗರ್ತಿ ದಮ್ಮಯ್ಯ ಕೊಳ್ಳಯ್ಯ
ಮನವಾರೆ ಪೇಳ ನಿನ್ನಿಚ್ಛೆಯಂ ಪೇಳಯ್ಯ|
ಒಂದೆ ಮೇಲೋಗರವನೊಮ್ಮೆ ಸವಿನೋಡೆನುತೆ
ಮಂದಗಿವೆ ಮಜ್ಜಿಗೆಯನವಧರಿಸು ಶಿವ ಎನುತೆ|

---

[1] ಆರೈಸುತಿರಲ (ಖ.); [2] ಭೋಲಿ (ಖ.)

ಎನ್ನರಸ ಮೊಸರೋಗರಲ್ಲವಂ ನೀ ಕೊಳ್ಳ
ಚೆನ್ನಸ ಮಹಾನಿಧಿಯೆ ಕರುಣದಿಂ ಕೈಕೊಳ್ಳ |
ಎಂದೆಂದು ತೂಪಿಱಿದು ಭಸಿತದಿಂ [1]ಕಾ[1]ಪಿಟ್ಟು
ಸಂದಣಿಪ ಭಯಭಕ್ತಿಯಿಂ ಮನದ ಮುಂದಿಟ್ಟು |
ಆರೈಸಲಿಕ್ಕುವ ಶರಣರಿಚ್ಛೆಗವತರಿಸಿ
ಕಾರುಣ್ಯನಿಧಿ ಗಿರಿಜೆದೇವ ಗಣತತಿವೆರಸಿ |
ಉಂಡನೆಲ್ಲರ್ಗಿಷ್ಟವರನಾಗಿ ಶಂಕರಂ
ತಂಡತಂಡದ ಕರುಣದಿಂ ಚಂದ್ರಶೇಖರಂ |
ಆಗಳೊಲವಿಂ ಹಸ್ತಪ್ರಕ್ಷಾಳನಂ ಮಾಡಿ
ರಾಗದಿಂ ಚಂದನದ ಕೈಘಟ್ಟಿಯಂ ನೀಡಿ |
ಕಸ್ತುರಿಯ ಕರ್ಪುರದ ವೀಳೆಯಂಗಳನಿತ್ತು
ಬಿತ್ತರಿಸಿ ಚಮರಸೀಗುರಿದರ್ಪಣಮನಿತ್ತು |
ಬಿಜಯಂಗೆಯಿಸಿಕೊಂಡು ನಿಜಲಿಂಗಮೂರ್ತಿಯಂ
ವಿಜಯರಲ್ಲಲ್ಲಿ ಪ್ರಸಾದಸುಖದರ್ತಿಯಿಂ |
ತೊಡಗಿದರ್ ತಮತಮಗೆ ಕೂಡೆ ಶರಣೆಂದೆನುತೆ
ಮೃಡನ ಪ್ರಸಾದಕ್ಕೆ ಹರುಷದಿಂ ಪೊಡಮಡುತೆ |
ಏನೆಂಬೆನವರ ಸದ್ಭಕ್ತಿಯಾನಂದಮಂ
ನಾನಾವಿಧದೊಳಿಪ್ಪ ಗಣನಿವಹದಂದಮಂ |
ಸವಿಸವಿದು ರುಚಿಯನರ್ಪಿಸುತಿರ್ಪವರ್ ಕೆಲರು
ಸವಿಸವಿದು ಬಸವನಂ ಹರಸುತಿರ್ಪರ್ ಕೆಲರು |
ಭಕ್ತಪ್ರಸಾದಮಂ ಕೇಳುತಿರ್ಪರ್ ಕೆಲರು
ಭಕ್ತರ್ಗೆ ಮಱೆದಿಕ್ಕಲಮ್ಮದಿರ್ಪರ್ ಕೆಲರು |
ಹರಿಹರಿದು [2]ತು[2]ತ್ತಿಟ್ಟು ಕುಣಿವುತಿರ್ಪರ್ ಕೆಲರು
ಶರಣರಂ ನೋಡಿ ಬೆಱಗಾಗುತಿರ್ಪರ್ ಕೆಲರು |

---

1 ಕೋ (ಖ.) ; 2 ಸು (ಖ.)

ತುಪ್ಪಮಂ ಸುಱಿಸುಱಿದು ಬಸವಣ್ಣ ಬಾಳ್ಗೆಂದು
ಒಪ್ಪಿ ಹಾಲಂ ಸವಿದು ಬಸವಣ್ಣ ಶರಣೆಂದು |
ಸರಸಪಕ್ವಾನ್ನಮಂ ಸವಿದೆನಗೆ ತಸಗೆಂಬ
ಅರರೆ ಹಾಲುಂಡೆಯುಂ ತವಕದಿಂ ಸುರಿಯೆಂಬ |
ಪರಿಣಾಮದಿಂ ತೇಗಿ ಬಸವನಂ ಹರಸುತಂ
ಪರವಶೀಭೂತರಾಗುತೆ ಸುಖದೊಳೊಪ್ಪುತಂ |
ಲಿಂಗಪ್ರಸಾದಿಗಳು ಶರಣಪ್ರಸಾದಿಗಳು
ಸಂಗಪ್ರಸಾದಿಗಳು ಶಬ್ದಪ್ರಸಾದಿಗಳು |
ಗೀತಪ್ರಸಾದಿಗಳು ಸೋೕಟಪ್ರಸಾದಿಗಳು
ಮಾತೇನೊ ಶರಣದರುಶನದ ಪ್ರಸಾದಿಗಳು |
ವೀರಪ್ರಸಾದಿಗಳು ಶಾಂತಪ್ರಸಾದಿಗಳು
ಸಾರಪ್ರಸಾದಿಗಳು ಧೀರಪ್ರಸಾದಿಗಳು |
ಅಚ್ಚಪ್ರಸಾದಿಗಳು ನಿಚ್ಚಪ್ರಸಾದಿಗಳು
ನಿಚ್ಚಟದ ಸಮಸುಖದ ಸರ್ವಪ್ರಸಾದಿಗಳು |
ಎಸೆವ ಪ್ರಸಾದದಿಂ ಪುಣ್ಯೋದರಂ ತಣಿಯೆ
ಬಸವಕೀರ್ತಿಗಳಿಂದ ಕಿವಿಗಳೆಲ್ಲಂ ತಣಿಯೆ |
ಬಸವನ ನೆನಹಿನಿಂದವೆಲ್ಲರ ಮನಂ ತಣಿಯೆ
ಬಸವನಾಲೋಕದಿಂ ಲೋಚನಂಗಳ್ ತಣಿಯೆ |
ಬಸವನ ಸ್ತುತಿಗಳಿಂ ನಾಲಗೆಗಳುಂ ತಣಿಯೆ
ಬಸವ[1]ಸ್ಪ[1]ರುಶನದಿಂದಲೆಲ್ಲರಂಗಂ ತಣಿಯೆ |
ಸಕಲಗಣವೃಂದಂ ಪ್ರಸಾದದೋಕುಳಿಯಾಡಿ
ಸಕಲ ಗಣಸಂಕುಳಂ ತ[2]ಣು[2]ವಿನೋಕುಳಿಯಾಡಿ |
ಅಲ್ಲಿ ಬಸವಣ್ಣನಂ ಶರಣತತಿ ಪರಸುತಿರೆ
ಎಲ್ಲ ತೆಱದಿಂ ಬಸವನಂ ಪೊಗಳುತಿರೆಯಿರೆ ||

---

ಪ (ಕ.) ; [2] ನು (ಖ.)

## ಎಂಟನೆಯ ಸ್ಥಲ

ಬಸವನ ಮಾತೆ ಮಾತು ಬಸವಣ್ಣನ ಭಕ್ತಿಯ ಓಜೆಯೋಜೆ ಕೇಳ್
ಬಸವನ ರೀತಿ ರೀತಿ ಬಸವಣ್ಣನ ಕಿಂಕರವೃತ್ತಿ ವೃತ್ತಿ [1]ಮೇಣ್[1] |
ಬಸವನ ಬಟ್ಟೆ ಬಟ್ಟೆ ಬಸವಣ್ಣನ ಬಿಂಕದ ಭಾಷೆ ಭಾಷೆ [1]ಹೋ[1]
ಬಸವನ ನಿಷ್ಠೆ ನಿಷ್ಠೆ ಬಸವಣ್ಣನ ಸೇಮವೆ ಸೇಮವುರ್ವಿಯೊಳ್ || ೧*

ಬಸವನ [2]ಗೀ[2]ತಿ [2]ಗೀ[2]ತಿ ಬಸವಣ್ಣನ ನಿರ್ಮಲರೂಪು ರೂಪು ಕೇಳ್
ಬಸವನ ಗಾಡಿ ಗಾಡಿ ಬಸವಣ್ಣನ [3]ನಿರ್ಮಲ ಕೀರ್ತಿ ಕೀರ್ತಿ ಮೇಣ್[3] |
ಬಸವನ ಬುದ್ಧಿ ಬುದ್ಧಿ ಬಸವಣ್ಣನ ಪುಣ್ಯದ ಲೀಲೆ ಲೀಲೆ ಹೋ
ಬಸವನ ರಕ್ಷೆ ರಕ್ಷೆ ಬಸವಣ್ಣನ ಶಿಕ್ಷೆಯೆ ಶಿಕ್ಷೆ ಲೋಕದೊಳ್ || ೨*

ಬಸವನ ಪೆರ್ಮೆ ಪೆರ್ಮೆ ಬಸವಣ್ಣನ ಸಜ್ಜನ ಕೂರ್ಮೆ ಕೂರ್ಮೆ ಕೇಳ್
ಬಸವನ ಸೀಮೆ ಸೀಮೆ ಬಸವಣ್ಣನ ಶೀತಳಶಾಂತಿ ಶಾಂತಿ ಮೇಣ್ |
ಬಸವನ ಜಾಣು ಜಾಣ್ ಬಸವಿದೇವನ ಭಾವದ ಕಾಣ್ಕೆ ಕಾಣ್ಕೆ ಹೋ
ಬಸವನ ಭಕ್ತಿ ಭಕ್ತಿ ಬಸವಣ್ಣನ ಯುಕ್ತಿಯೆ ಯುಕ್ತಿ ಲೋಕದೊಳ್ || ೩*

ಎಂದಿಂತು ಪೊಗಳೆ ಶರಣರ
ಮುಂದೆ ಮುಸಂಗುಂದಿ ಕಂದಿ ಕೈಮುಗಿದು ಕರಂ |
ಸೊಂದು ಶಿವಭಕ್ತಿಭಯರಸ-
ದಿಂದಂ ನೆಱೆ ತಗ್ಗಿ ಕುಗ್ಗಿ ನುಡಿದಂ ಬಸವಂ || ೪*

ದೇವರ್ ನೀವೇ ಪ್ರಾಣಂ
ನೀವೇ ಕಣ್ ನೀವೆ ಮಾತೆ ನೀವೇ ಜನಕಂ |
ನೀವೇ ಗತಿ ನೀವೇ ಮತಿ
ನೀವೇ ಪತಿ ನೀವೆ ಗುರುವೆನಗೆ ಬೇಱುಂಟೇ || ೫*

---

[1] ಯಾ (ಖ.) ; [2] ರೀ (ಖ.) ; [3] ಕೀರ್ತಿ ಕೀರ್ತಿ ಮಾಣ್ (ಕ.), ಕೀರ್ತಿಯೆ ಕೀರ್ತಿ ಮಾಣು ಮಾಣ್ (ಖ.)

ಮಾಣದೆ ಪಾದವೆ ತೊಟ್ಟಿಲ್
ರೇಣುವೆ ಬಾಯ್ವೆಣ್ಣೆ ನಖರುಚಿಯೆ ಮೊಲೆವಾಲ್ ಮ-|
ತ್ಪ್ರಾಣವೆ ನಿಮ್ಮಯ ಕರುಣಂ
ಕ್ಷೋಣಿಯೊಳೆನಗಾಗೆ ಬಸವನಾದೆಂ ಬಳಿಕಂ || ೬*

ಶರಣರ ಬಂಟರ ಬಂಟಂ
ಶರಣರ ಕಿಂಕರರ ಕಿಂಕರರ ಕಿಂಕರನಾಂ |
ಶರಣರ ಲೆಂಕರ ಲೆಂಕಂ
ಶರಣರ ತೊತ್ತೆನಗೆ ಬೇಱೆ [1]ಗತಿಮತಿಯು[1]ಂಟೇ || ೭*

ಎಂದು ಶರಣಸಂಕುಳಕ್ಕೆ ಸಾತ್ತ್ವಿಕಭಯಭಕ್ತಿಭರಿತ ಕಿಂಕುರ್ವಾಣ ವಾಕ್ಯಮಂಡಿತವದನಮಂಡಲನಾಗಿ, ದಂಡನಾಥಚೂಡಾಮಣಿ ಭಕ್ತ ಕುಲತಿಲಕಂ ಸತ್ಯಸಾಮ್ರಾಜ್ಯಸಾರ್ವಭೌಮಂ ಸದ್ಭಕ್ತಿಸೂಳೆಗಾಱಂ ಮುಕ್ತಿ[2]ದಳವುಳ[2]ಕಾಱನೆನಿಪ ಬಸವರಾಜಂ ಭಕ್ತರಂ ಕಂಡು ಕಡು ನೇಹವೆಡೆಗೊಂಡು, ನಡೆತಂದೆಲ್ಲರ್ಗೆ ಬೇಱೆ ಬೇಱೆ ದಿವ್ಯಚಂದನಮನು ದ್ವರ್ತನಂಗೆಯ್ದು ಮೃಗಮದಮನಲಂಪಿಕ್ಕಿ ಸಾದಿನ ಕಂಪಂ ಕಕ್ಷಪುಟದೊಳು ಕೈಕೊಳಿಸಿ ಭಸಿತದೊಳು ಬೆರಸಿದ ಕತ್ತುರಿಯ ಸಾರಮಂ ನೊಸಲೊಳು ಮೇಳೈಸಿ ಪರಿಮಳದಲರ್ಗಳಂ ಸಿರಿಮುಡಿಗೆ ಸಿಂಗರಿಸಿ ನೋಡಿ ನೋಡಿ, ಕಣ್ಗಳಿಂದಪ್ಪಿ ಮನದ ನೊಸ[3]ಲೊ[3]ಳು ಮುಂಡಾಡಿ ತಣಿವಿಲ್ಲದ ತವಕಂ ಪೊಣ್ಮೆ ಸತ್ತ್ವಗುಣಂ ಮತ್ತಂ ವೆಗ್ಗಳವಾಗೆ ಮಿಕ್ಕು ಮೀಱಿ, ಬಿಜ್ಜಳನ ಭಂಡಾರದ [4]ಚಿ[4]ನಿ ಮಹಾ[4]ಚಿನಿ[4] ದೇವಾಂಗ ಲತಾವಳಿ ಹಂಸಾವಳಿ ಗಜಾವಳಿ ಮೊದಲಾದ ಪಟ್ಟಾವಳಿಯ ದಿಂಡುಗಳಂ ತರಿಸಿ [5][ಚೆ]ಂದದೊಳಿರಿಸಿ ತರತರದಿಂ ಬಿಡಿಸಿ ಪರಿಪರಿಯ ದಿವ್ಯವಸ್ತ್ರಂಗಳಂ ತೆಗೆದು ಪಿಡಿದು ಶರಣರ ಮೈಯೊಳು ಬುರಬುರನೆ ನೆಗೆನೆಗೆದೇಳ್ವ ಪುಳಕದ ಸಾಲ್ಗೆ ದೃಷ್ಟಿಯಾದಪುದೆಂದು ಗವಸಣಿಗೆಯಿಕ್ಕುವಂತೆ ಮೈತೀವಿ ಪೊದೆಯಿಸಿ

[1] ಮತಿಯೊಂದು (ಕ.); [2] ಯ ದಳಳಿ (ಖ.); [3] ಲ್ಗಳೊ (ಕ.); [4] ಚೀ ?; [5] ಛ (ಕ.ಖ.)

ದಿಗಂಬರನ ಶರಣರ್ಗು[1]ಡುಗೆಗೊ[1]ಟ್ಟು, ಸಿಂಗರದತ್ತ ಮನಂ ಸೆಳೆದಾಭರಣಂಗಳ ಪೆಟ್ಟಿಗೆಯಂ ತರಿಸಿ ರತ್ನಮಂ[2]ಜು[2]ಳಿಕೆಯ ಮುದ್ರಿಸಿದ ಮುಚ್ಚಳಂ ತೆಗೆದು ಮಾಣಿಕದ ಕರ್ಣಾವತಂಸಮಂ ಕಿವಿಗಳಿಗಳವಡಿಸಿ ಮುತ್ತಿನ ಹಾರಮಂ ಪೇರುರಕ್ಕೆ ಸಾರ್ಚಿ ಬಾಹುಪೂರಯುಮಂ ತೋಳ್ಗೆ ಕೈಕೊಳಿಸಿ ಕಂಕಣಮಂ ತಿರುಂಪಿ ನೂಂಕಿ ಮುದ್ರಿಕೆಗಳಂ ಭದ್ರಾಂಗುಲಿಗಿತ್ತು, ಆರಾಧನೆಗೆ ಚಿತ್ತವುರವಣಿಸಿ [3]ಜಾ[3]ಳಿಗೆಗಳಂ ತರಿಸುತಂ ಮುದ್ರೆಗಳನೊಡೆದು ಕುಡಿತೆವೊಂಗಳಂ ಮೃಡಭಕ್ತರ ಮೆಲ್ಲಡಿಗಳೊಳು ಸುರಿಸುರಿದು, ಕಣ್ತೀವಿ ನೋಡಿ ಮೈತೀವಿ ಮುಟ್ಟಿ ನಾಲಗೆತೀವಿ ಹೊಗಳಿ ಮನಂತೀವಿ ನೆನೆದು ಬುದ್ಧಿತೀವಿ ಬೆಚ್ಚಿ ಅಹಂಕಾರತೀವಿ ಪೆಚ್ಚಿ ಚಿತ್ತತೀವಿ ಅಚ್ಚೊತ್ತಿ, ಮತ್ತೆ ಇತ್ತಿತ್ತು ತಣಿಯದೆ, ಪುಣ್ಯಲೋಭಿ ಭಕ್ತರ ಬಾಕುಳ್ಳಿ ಶರಣರ ಸೂಱೆ ಸಜ್ಜನರ ಸಲೆಮಾಱು ಶರಣರ ಸಂಗದ ಶಾಶ್ವತನೆನಿಪ ಬಸವರಾಜಂ ಲಿಂಗಜಂಗಮಪ್ರಸಾದಹೃದಯನಾಗಿ ಶರಣರೊಳು ಸದ್ಗೋಷ್ಠಿಯಿಂದಿರ್ದು ಮತ್ತಮಿಂತೆಂದಂ—

ದೇವದೇವ, ನಿಮ್ಮರ್ಥಮಂ ನಿಮಗೆ ತೊತ್ತುಗೆಲಸವಂ ಮಾಡಿ ಬೇಡಿತಂ ನೀಡುವ ಕಿಂಕರನೆಂದು ನೀವೆ ಕೊಂಡುಕೊನೆದಾಡಿಸುವ ನಿಮ್ಮ ಕಣ್ಣ ಮೊದಲ ಕಪ್ಪಡದ ಹಾಹೆ ಆನೆಂಬುದು. ಹಲವಂ ನುಡಿವುದೆಲ್ಲಂ ಪುಸಿ, ನಡೆವುದೆಲ್ಲಂ ತಪ್ಪು. ನೇಮವಱಿಯದ ನೀರಸಂ ಪೂಜೆಯಱಿಯದ ಪುಣ್ಯದೂರಂ ಹಾಡಲಱಿಯದ ಹಸುಳೆಯಪ್ಪೆನ್ನೊಳು ಲೇಸನಱಸದೆ ತಪ್ಪಂ ನೋಡದೆ ಕರುಣಿಪುದು—ಎಂದು ಬಿನ್ನೈಸಿದ ಬಸವಂಗೆ ಮೆಚ್ಚಿ ಮಾಹೇಶ್ವರ ಕುಲಂ ಭೋರನೆ ಪರಸಿ ಹಾರೈಸಿ ಹಿಗ್ಗಿ ತಣಿದು ಕುಳ್ಳಿರ್ದು ಮೆಚ್ಚಿ ಮನಂತೀವಿದಾನಂದದಿಂ ಮಿಕ್ಕುಮೀಱಿ—

ಎಲೆ ಬಸವ ಬಸವಣ್ಣ ಬಸವಯ್ಯ ಬಸವರಸ ಬಸವರಾಜ ಬಸವಿದೇವ, ಕೇಳಯ್ಯ. ನಿನ್ನ ನೇಮಮಿದಾರ್ಗುಂಟು! ಗುರುಲಿಂಗದೊಳೆರಡಿಲ್ಲದಿಪ್ಪೆ. ಶರಣರಂ ಸಂಗನೆಂದೆ ಕಾಣ್ಬೆ. ಬಂದ ಭಕ್ತರನತ್ಯಾದರಿಪೆ. ಬಪ್ಪ

---

1 ಡುಕೊ (ಕ.), ಡಿಗೆಗೊ (ಖ.); 2 ಜ (ಕ.); 3 ಜೋ (ಖ.)

ಭಕ್ತರಂ ಹರುಷದೊಳಿದಿರ್ಗೊಂಬೆ. ಬೇಡಿದುದ ಶರಣರ್ಗಿಲ್ಲೆನ್ನದೀವೆ. ಬೇಡಲೊಲ್ಲದವರ್ಗೆ ಮಿಗಿಲಾಗಿ ಆ[1]ರಾಧಿ[1]ಪೆ. ಜಾಗ್ರತ್ಸ್ವಪ್ನಸುಷುಪ್ತಿಯವಸ್ಥಾತ್ರಯಂಗಳೊಳು ಶರಣರಂ ಸಂಗಸೆಂದಲ್ಲದೆ ಕಾಣೆ. ನಿಚ್ಚಶಿವರಾತ್ರಿಯನಚ್ಚರಿಯಿಂ ಮಾಳ್ಪೆ. ಜಂಗಮಪ್ರಾಣಿಯಾಗಿಪ್ಪೆ. ಶಿವಲಿಂಗಾರ್ಪಿತವಲ್ಲದುದನಾಘ್ರಾಣಿಸೆ, ನೋಡೆ, ನುಡಿಯೆ, ಮುಟ್ಟೆ, ಕೇಳೆ. ಶಿವಸಮಯವನುದ್ಧರಿಸುವೆ. ಪರಸಮಯವಂ ಸಂಹರಿಸುವೆ. ಲಿಂಗದಲ್ಲಿ ಕಠಿನಮಂ ಕೇಳೆ. ಜಂಗಮದಲ್ಲಿ ಜಾತಿಯನಱಸೆ. ಪ್ರಸಾದದಲ್ಲಿ ಅಪವಿತ್ರತೆಯನಱಿಯೆ. ಪರಾಂಗನೆಯರಂ ಹೆತ್ತ ತಾಯ್ಗಳೆಂಬೆ. ಪರದ್ರವ್ಯಮಂ ಕಿಲ್ಬಿಷವೆಂದು ಮುಟ್ಟೆ. ನಡೆದು ತಪ್ಪೆ, ನುಡಿದು ಹುಸಿಯೆ, ಹಿಡಿದು ಬಿಡೆ, ಬಿಟ್ಟು ಹಿಂಗಲೀಯೆ, ಕೊಟ್ಟು ನೆನೆಯೆ, ನಟ್ಟು ಕೀಳೆ, ಮುಟ್ಟಿ ಪೆಱಪಿಂಗೆ, ಕೂಡಿ ತಪ್ಪೆ, ನೋಡಿ ನಿರಾಕರಿಸೆ, ನೆನೆದು ಮಱೆಯೆ. ಮನದೊಳೋವರಿಯಿಲ್ಲ, ಬುದ್ಧಿಯೊಳು ವಿಸಂ[2]ಚವಿ[2]ಲ್ಲ, ಅಹಂಕಾರದೊಳು ಗರ್ವವಿಲ್ಲ, ಚಿತ್ತದೊಳು ಹೊಱೆಯಿಲ್ಲ, ಕಾಮವಿಲ್ಲ, ಕೋಪದ ಮಾತೇಕೆ? ಲೋಭದ ಗಾಳಿ ತೀಡದು, ಮೋಹಕೆ ತೆಱಹಿಲ್ಲ, ಮದದ ಸೊಗಡು ಹೊದ್ದದು, ಮತ್ಸರಕ್ಕಿಂಬಿಲ್ಲ. ಬಸವರಾಜ, ನಿನ್ನ ಗುಣಂಗಳಂ ಬಣ್ಣಿಸಲೆಮ್ಮಳವಲ್ಲ. ಈಶನ ಮಿಾಸಲಪ್ಪ ಭಕ್ತ, ನಿನಗೆಣೆಯಿಲ್ಲ ಪಡಿಯಿಲ್ಲ ಪಾಸಟಿಯಾವಂ? ಪಾಷಂಡಿಭೂಮಿಯೊಳು ಶಿವಭಕ್ತಿಯನಾರಂಭಿಸಿ ಸಾಮರ್ಥ್ಯಮಂ ಬಿತ್ತಿ ಪ್ರತ್ಯಕ್ಷಂಗಳಂ ಬೆಳೆದು ಗಣಪರ್ವಂಗಳಂ [3]ಸು[3]ಫಲಂ ಮಾಡಲೆಂದು ಬಂದ ಕಾರಣಿಕ ಬಸವ, ನಿನ್ನ ದೆಸೆಯಿಂದೆಮ್ಮ ಭಕ್ತಿ ಬಣ್ಣಾವೇಱಿತು—ಎಂದಡಿಗಡಿಗೆ ಮೆಚ್ಚಿ ತೂಗಾಡುವ ಗಣಂಗಳ ಚರಣಂಗಳಂ ಬಿಗಿಯಪ್ಪಿ ಬಸವರಾಜಂ ಪೊಗಳ್ತೆಗೆ ತಲ್ಲಣಿಸಿ ತಗ್ಗಿ ಮಲ್ಲಣಿಗೊಂಡಾಗಳಾಗಳಿನ ಸಂಗತಿಗೆ ಹೊಸ ಹೊಸ ಗೀತಮಂ ಕೇಳಿಸುತ್ತಿರ್ದ ಸಮಯದೊಳು;

ನೆರೆದು ಕುಳ್ಳಿರ್ದ ಮಹಾಮಹಿಮರ ಮಂದಿರದಲ್ಲಿ ಶಿವಭಕ್ತಿಗೆ

[1] ದರಿ (ಖ.); [2] ಚಯಿ (ಖ.); [3] ಸ (ಖ.)

ನವಯೌವನಮಾದಂತೆ ಅರ್ಚನೆಗರಳಲಿರ್ದ ಪರಿಮಳದ ಮೊಗ್ಗೆಯಂತೆ ಶಿವಜ್ಞಾನಕ್ಕೆ ಸೊಬಗಾದಂತೆ ಉನ್ಮತ್ತಪಂಚವಿಂಶತಿಪ್ರಾಯಂ ಕವಿದು ಅರಮನೆಯಿಂ ಪೊಱಮಟ್ಟು, ಹೊ[1]ದ್ದ[1] ದೇವಾಂಗದಿಂ ಉಟ್ಟ ಪಟ್ಟಾವಳಿಯಿಂ ತೊಟ್ಟ ದಿವ್ಯಾಭರಣದಿಂ, ರುದ್ರಲೋಕದ ರಾಜಪುತ್ರರಂತೆ ಕೈಲಾಸದ ಕಮನೀಯರಂತೆ ರಜತಗಿರಿಯ ವಿಜಯರಂತೆ ಮೇರುವಿನ ಧೀರರಂತೆ, ಮಹಾದೇವನ ಮಕುಟವರ್ಧನರು ಮದನಹರನ ಮದಕರಿಗಳು ಹರನ ಶರಭಂಗಳು ನರಲೋಕದೇವೇಂದ್ರರು ನೆರೆದು ಪರೆದು ಬಿಜ್ಜಳನ ಪುರದ ಪಲವು ರಾಜವೀಥಿಗಳೊಳು ಸುಳಿತಪ್ಪಾಗಳು, ಪುರಜನಮುಂ ಪರಸಮಯಿಗಳುಂ ನೆರೆದ ನೆರವಿಯುಂ ಕೌತುಕಮನಾಳ್ದು ನೋಡುತಂ ಬರೆವರೆ ;

ಬಿಜ್ಜಳನ ಗುರುವಪ್ಪ ನಾರಣಕ್ರಮಿತಂ ಸೌರಿಭಟ್ಟಂ ವಿಷ್ಣುಪೆದ್ದಿಗಳು ಮೊದಲಾದ ವೈಷ್ಣವರೆಲ್ಲಂ ಕಂಡು[2]ಕಂ[2]ಡು ಅಸೂಯೆಯೊಳು ನಡೆದು ಅಹಂಕಾರದೊಳುಬ್ಬಿ ಮತ್ಸರದೊಳು ಬಿರಿದು ಹರಭಕ್ತರ ಸಂಪದಮಂ ನೋಡಲಾಱದೆ ಬಿಸುಸುಯ್ದು ಸೈರಿಸಲಾಱದೆ ಕುದಿಕುದಿದು ಕೋಟಲೆಗೊಂಡು ಅನುತಾಪದೊಳುರಿದು ಮನಂ ಕರಿಮುರಿವೋಗಿ ಬುದ್ಧಿ ಬಱಿದಾಗಿ, ನಿಲಲಾಱದೆ ಗಳಗಳನೆ ಪರಿತಂದು—ಎಲೆ ಎಲೆ ಮರುಳರಸ, ಪುರದೊಳು ಸುಳಿವ ಶಿವಭಕ್ತರ ಸಿರಿಯನೇನಂ ಬಣ್ಣಿಪೆವು ! ನಿನ್ನ ಭಂಡಾರದೊಳು ನೀನಿಕ್ಕಲಮ್ಮದ ಪದಕಂ ಶರಣರ ಪೇರುರದೊಳು, ನೀಂ ಮುಟ್ಟಲಂಜುವ [3]ತಾ[3]ರಹಾರಂ ಭಕ್ತರ ಕೊರಳ್ಗಳೊಳು, ನೀಂ ಕೈಕೊಳಿಸಲಮ್ಮದ ವಜ್ರದ ಕಂಕಣಂ ಶರಣರ ಕರದೊಳು, ನೀಂ ನೋಡಲಮ್ಮದ ರತ್ನಮುದ್ರಿಕೆಗಳು ಶರಣರ ಕೋಮಲಾಂಗುಲಿಯೊಳು, ನೀಂ ತೊಡಲಮ್ಮದಾರಾಧಿಪ ದಿವ್ಯಾಭರಣಂ ಶರಣರ ಮೈಯೊಳು, ನೀನುಡಲಮ್ಮದೆ ಪೊಡಮಡುವ ನವವಸ್ತ್ರಂ ಶರಣರಂಗದೊಳು, ನೀಂ ಪೂಸಲಮ್ಮದ ಯಕ್ಷಕರ್ದಮಂ ಭಕ್ತರ ಕಕ್ಷವಕ್ಷಂಗಳೊಳು, ನೀನೇ

---

[1] ದೆದ ? ; [2] ಕ (ಕ.) ; [3] ತೋ (ಕ.)

ಉಲಮ್ಮದ ದಿವ್ಯವಾಹನಂ ಭಕ್ತರ [1]ರಾ[1]ಷ್ಪೆಯೊಳು ಕಾಣಬಂದಪವು. ಬಸವಂಗೆ ಮರುಳಾದೆ. ಭಂಡಾರಂ ಸೂಱೆವೋದುದು. ರಾಜ್ಯದೆಕ್ತ್ರರಂ ಭಕ್ತರ್ಗೆ ಬಱಿದಾಯಿತ್ತು. ಭಕ್ತರುರವಣೆ ಪಿರಿದಾಯಿತ್ತು, ಭಕ್ತರ ತೇಜಂ ಬಲುಹಾಯಿತ್ತು. ಅದಲ್ಲದೆಯುಂ, ವಿಷ್ಣುವಂ ಒಯ್ವರೆಂದಡೆ ವೈಷ್ಣವರಂ ಕಂಡರಾರು? ಬ್ರಹ್ಮನಂ ಬಗೆಯರೆಂದಡೆ ಬ್ರಾಹ್ಮರಂ ಬಲ್ಲರಾರು? ಜಿನನಂ ಕಿತ್ತು ಬಿಸುಡುವರೆಂದಡೆ ಜೈನರ ಸುದ್ದಿಯೆಲ್ಲಿಯದು? ಬೊಮ್ಮರಂ ಬೆಳ್ಮಾಡುವರೆಂದಡೆ ಸ್ವಾಮಿಗಳಂ ಸರಕುಮಾಡುವರಾರು? ಇಂತು ಷಡ್ದರ್ಶನಂ ಕೀಳಾದವು, ಮೃಡದರ್ಶನಂ ಮೇಲಾದುದು. ಇದಂ ದಿ[2]ಟಂ[2] ವಿಚಾರಿಸಡೆ ಕ್ಷತ್ರಿಯಧರ್ಮವಂ ಕೆಡಿಸುವರೆ? ಈ ರಾಜ್ಯವನು ದಾಸೀನಂಮಾಳ್ಪರೆ? ಆಗಲಿದಂ ಸೈರಿಸಿರ್ಪೊಡೆ ಎ[3]ಮ್ಮೆಲ್ಲರಂ[3] ಬೀಳ್ಕೊಟ್ಟು ನೀನುಂ ಬಸವನುಂ ಸುಖದೊಳಿಪ್ಪುದು—ಎನಲು;

ಎಲ್ಲಾ ಕರಣಂಗಳಂ ಕರೆಯಿಸಿ ಭಂಡಾರದ ಲೆಕ್ಕಮಂ ನೋಡಿ ಸ್ಥಿತವಂ ಬಸವನ ಕೈಯಲಿ ಕೊಂಡುಪಿಡುವುದೆಂದು, ಕಾಗೆಗಳಂತಱಚಿ ಗೂಗೆಗಳಂತೆ ಪಲುಂಬಿ ಕತ್ತೆಗಳಂತೊಱಲಿ ಕೋಡಗಗಳಂತೆ ಪಲುಗಿರಿದು ನರಿಗಳಂತೆ ಜಿನುಗಿ ಕಾಳ್ಗೆಡೆವ ಕರ್ಮಿಗಳ ಮಾತಿಂಗುಮ್ಮಳಿಸಿ, ನಿರ್ವೈವರ ಬೋ[4]ಧ[4] ನೆಲೆಗೊಂಡು ಚಿತ್ತಂ ಕಲಂಕಿ ಬಿಜ್ಜಳಂ ಮರುಳಾಗಿ ಬಸವರಾಜನನೊಡಗೊಂಡು ಬರ್ಪುದೆಂದು ಚಾರರಂ ಕಳುಪಲು, ಅವರೊಡನೆ ವಿಭೂತಿಯ ಸುಭಟಂ ರುದ್ರಾಕ್ಷಿಯ ರುದ್ರಂ ಪಂಚಾಕ್ಷರಿಯ ಪಂಚಮುಖನೆನಿಪ ಬಸವರಾಜಂ ಬಪ್ಪ ಸಮಯದೊಳು, †ಕತ್ತಲೆಯ ಕೊ[5]ರ್ಬು[5] ಸೂರ್ಯನ ಮುಂದ[ಣ]ರುಣೋದಯ[6][ದಿ] ಪರಿ[ಯಿ][6]ತೆಂಬಂತೆ ಹಿಂದೆ ಗಳಹಿದ ಮಂ[7][ದಿವಾ]ಳದ ಮಂದಿ ಮುಂದುಗೆಟ್ಟಲ್ಲಲ್ಲಿ ನಡುಗುತಿರೆ, ಬಂದು ಸಮುಗದ್ದುಗೆಯೊಳು† ಸಂಗನ ಬಸವಂ ಬಸವಿದೇವಂ ದಂಡನಾಥ ಚೂಡಾಮಣಿ ಕುಳ್ಳಿರ್ಪುದುಂ;

---

[1] ವಾ (ಖ.); [2] ರ (ಕ.); [3] ಮಗೆಲ್ಲಂ (ಕ.); [4] ಧೆಗೆ (ಕ.); [5] ಬ್ಬುಂ (ಕ.); [6] ದಪರಿಯಂ (ಕ.); [7] ದ್ಯ (ಕ.); †† ಈ ಚಿಹ್ನೆಗಳೊಳಗಿನ ಭಾಗವು (ಖ.) ದಲ್ಲಿ ಇಲ್ಲ.

ಬಿಜ್ಜಳಭೂಪಂ ಮೆಲ್ಲಮೆಲ್ಲನೆ ಮಾತುಮಾತಿಂ ಲೆಕ್ಕದ ಮಾತಂ ತೆಗೆದು, ಕರಣಿಕರಂ ಝುಂಕಿಸಿ ಭಂಡಾರದ ಆದಾಯಬೀಯಮುಮಂ ನೋಡೆ ಬಸವನ ಮೇಲೆ ಪದಿನೆಂಟುಕೋಟಿ ದ್ರವ್ಯಂ ಸ್ಥಿತವಾಗೆ, ಬಿಜ್ಜಳಂ ಮಱುಗಿ ದಣ್ಣಾಯಕರ ಮೊಗಮುಂ ನೋಡುತಾಕ್ಷೇಪದಿಂ ಕೈ ಮುಗಿದು—ನಿಮ್ಮ ನಂಬಿ ಭಂಡಾರಮುಂ ಕೊಟ್ಟಡೆನ್ನನಿಂತು ಕೆಡಿಸುವರೆ? ಶಿವಭಕ್ತರ್ಗಿತ್ತು ರಾಜ್ಯಮುಂ ನೀರೊಳದ್ದುವರೆ? ಹಲವು ಮಾತೇನು? ನಿಂದ ಹೊನ್ನಿಂಗೆ ನಿರ್ಣಯಮುಂ ಕೊಡುವುದು—ಎಂದು ನಿರೋಧಮುಂ ನುಡಿಯೆ ಬಸವಂ ಕೇಳ್ದು, ಪರಸಮಯಿಗಳ ನುಡಿ ಎಮ್ಮರಸನಂ ಮರುಳ್ಮಾಡಿತ್ತೆಂದು ಮನದೊಳಱಿದು—ಕೇಳೆಲೆ ಸಜ್ಜನರನಱಿಯದ ಬಿಜ್ಜಳಭೂಪ, ಉದಧಿ ನದಿಯ ನೀರಂ ನೀವುದೆ? ಭಾಸ್ಕರಂ ಕನ್ನಡಿಯ ಬೆಳಗಂ ಪಾರ್ವನೆ? ಶಿವಭಕ್ತರು ನಿನ್ನೊಡವೆಗಾಸೆಯ ಮಾಳ್ಪರೆ? ತಮ್ಮೊಡವೆಯುಂ ತಾವು ಕೊಂಡರು. ನಡೆನಡೆ—ಎಂದರಸನುಂ ಪರಸಮಯಿಗಳುಂ ಕರಣಂಗಳುಂ ಬೆರಸಿ ಭಂಡಾರದ ಮನೆಗೆ ಬಂದು, ಮುದ್ರಿಸಿದ ಪೆಟ್ಟಿಗೆಯ ಕೋ[1][ಟ್ಯ]ನುಕೋಟಿಯುಂ ತೆಗೆದು ಲೆಕ್ಕಿಸಿ ನೋಳ್ಪಾಗಳ್;

ನಿಲವಿನ ಪ[2]ದಿನೆ[2]ಂಟು ಕೋಟಿಗೆ ಛತ್ತೀಸಕೋಟಿ ಬಾಹತ್ತರ ಕೋಟಿಗಳಿಂ ಮಿಗಿಲೆನಿಸಿ ಇಮ್ಮಡಿ ನೂರ್ಮಡಿ ಸಾಸಿರ್ಮಡಿ ಲಕ್ಷಮಡಿ ಕೋಟಿಮಡಿಯಾಗಿ ಪೆರ್ಚುತ್ತಿರೆ, ಗಣಕರು ಲೆಕ್ಕಿಸಲಾಱದೆ ಬೆಱಗಾಗೆ ಪರಸಮಯಿಗಳ ಮೊಗಂ ಬೆಳ್ಪೇಱೆ ಬಿಜ್ಜಳನ ಮೊಗಂ ಲಜ್ಜೆಯೇಱೆ ಶರಣರ ಮೊಗಂಗಳು ಹರುಷವೇಱೆ, ಭೂಪನ ಮೊಗಮುಂ ನೋಡಿನೋಡಿ ಜಡಿದು ನುಡಿದು—ಕೇಳೆಲೆ, ನಿ[3][ನ್ನದೊ]ಂದರ್ಥವೆಂದು ನಿನ್ನದೊಂದು ರೂಪೆಂದು ಮುಂದಱಿಯದೆ ಮರುಳ್ಗೆ[4]ಡೆ[4]ವರೆ? ಮುಗ್ಧಭೂಪ, ಕೇಳು. ಸರ್ವಬ್ರಹ್ಮಾಂಡಸಾರ್ವಭೌಮನೆನಿಪ ಶ್ರೀಸಂಗಮೇಶ್ವರಲಿಂಗದಂಘ್ರಿಯಂ ಮಹಾಪದವಿಗಳು ಬಂದು ಬಿಡದೋ[5]ಲಗಿ[5]ಸುತಿಪ್ಪಲ್ಲಿ ಸಂಪದ

---

1 ಟಾ (ಕ.ಖ.); 2 ತ್ತೆ (ಖ.); 3 ನಗೊ (ಕ.ಖ.); 4 ಡು (ಕ.);
5 ಲ್ಗೈ (ಖ.)

ದೊಳೆಳ್ಳನಿತಂ ಕುಡೆ ಕುಬೇರನಾದಂ, ಕಾಂತಿಯೊಳಗಿನಿತನೀಯೆ ಭಾಸ್ಕರನಾದಂ, ವೀರದೊಳೊಂ[1]ದಂ ಲೇ[1]ಸನೀಯೆ ವೀರಭದ್ರನಾದಂ, ಚೆಲುವಿನೊಳಿನಿತುಂ ಸಿಡಿಯೆ ಕಾಮನಾದಂ, ನಿತ್ಯದ ಕಡೆಸೆಱಗಿನ ಸೋಂಕಂ ಕುಡೆ ರೋಮಜನಾದನೆಂದಡೆ ನೀನೆತ್ತಣ ಪರಮಾಣು, ಕ್ಷುದ್ರಜಂತು, ಶಿವನ ಮನೆಯ ತೊತ್ತಿನ ಮನೆಯ ತೊತ್ತಪ್ಪ ಮಾಯೆಯಾಡಿಸುವ ಮಣ್ಣರೂಪು, ಕಪ್ಪಡದ ಹಾಹೆ, ಕಲ್ಲ ಜಂತ್ರ, ಹುಲ್ಲ ಬೊಂಬೆ? ತೆಗೆತೆಗೆ, ಸಡಿಫಡ, ಶರಣರ ಮುಂದೆ ನೀನಾರು?—ಎಂದು ಬಸವರಾಜಂ ರುದ್ರಾವತಾರನಿಂ[2]ತಾಸ್ಫೋಟಿ[2]ಸೆ;

ಬಿಜ್ಜಳಂ ಧರೆಗಿಳಿದು ಜೀವನ್ಮೃತಕನಾಗಿ ಬಸವನ ಚರಣದೊಳು ದೊಪ್ಪನೆ ಬಿಳ್ದು—ಮುಂದಱಿಯದ ಮೂರ್ಖಂಗೆ, ಶರಣರನಱಿಯದ ಸರ್ವಾಪರಾಧಿಗೆ ಕರುಣಿಸುವುದು—ಎಂದು ಪನ್ನಿಚ್ಛಾಸಿರ ಲಕ್ಷವಸ್ತುವಂ ಚರಣದ ಮೇಲೆ ಸುರಿದು ದಣ್ಣಾಯಕರಿಂ ಮನ್ನಣೆವಡೆದು ಅವರಂ ಮಹಮನೆಗೆ ಬಿಜಯಂಗೆಯ್ಸಿ ಬೀಳ್ಕೊಂಡು, ಬಿಜ್ಜಳಭೂಪಂ ವಿಸ್ಮಿತಚಿತ್ತಂ ಕೌತುಕಹೃದಯನುಮಾಗಿ ಅದ್ಭುತರಸದೊಳಾಳುತ್ತೆ ತನ್ನರಮನೆಯೊಳಿರಲು; ಇತ್ತಲು ಬಸವರಾಜನಂ ರಾಜಶೇಖರಚರಣಸರಸೀರುಹಮಕರಂದ ಮಧುಕರಾಯಮಾಣನಂ ಜಂಗಮಪ್ರಾಣಿಯಂ ಶರಣಪರಿಸ್ತೋಮಂ ತಮ್ಮ ನಡುವಿಟ್ಟುಕೊಂಡು ಬಸವನ ಸತ್ಯಗುಣಮಂ ಸಾಮರ್ಥ್ಯಮಂ ತೇಜದುನ್ನತಿಯಂ ದಾನದತಿಶಯಮಮಂ ಬಣ್ಣಿಸುತ್ತಿರೆಯಿರೆ ||

---

[1] ದಲೆ (ಖ.); [2] ತೊಪ್ಪಡಿ (ಕ.)

## ಒಂಬತ್ತನೆಯ ಸ್ಥಲ

ಎಲೆ ಬಸವ ನಿನ್ನ ದಾಸೋ-
ಜ್ವಲಜಳಧಾರೆಗಳೊಳದ್ದು ಮೈಗರೆದು ಕರಂ |
ಒಲವಳಿದು ಕುಂದಿ ಸೆಡೆದರ್
ಬಲಿ ಶಿಬಿ ಜೀಮೂತವಾಹ[1]ನಂ ಕರ್ಣ[1]ರ್ಕಳ್ || ೧*

ಗುರುಬಸವ ನಿನ್ನ ಕೋಡಿಂ
ಸುರಭಿ ಕರಂ ಮೂಗುವಟ್ಟುದದು ಕಲ್ಲಾಯ್ತು |
ಪರುಷಂ ಮರನಾದುದು ಸುರ-
ತರು ಚಿಂತೆಯ ಸಾರ್ದುದಮಮ ಚಿಂತಾರತ್ನಂ || ೨*

ಶಿವಸೇವೆಯನುರುಶಿವನಸು-
ಭವಭಕ್ತಿಯನಱಿವ ಬಸವವಿಭು ನಿನ್ನ[2]ಱಿ[2]ವಂ |
ಭವನಱಿವಂ ಶಿವನಱಿವಂ
ಶಿವನ ಗಣಾಧೀಶರಱಿವರಱಿವವರೊಳರೇ || ೩*

ಎಂದು ಗಣಸಂತಾನವೊಲಿದು ಕೊಂಡಾಡುತಿರೆ
ನಿಂದು ಬಸವಣ್ಣನಂ ನೇಹದಿಂ ಹರಸುತಿರೆ |
ಬಸವರಾಜಂ ಕೇಳಿ ಕೈಮುಗಿದು ಕೊರಗುತಂ
ಶಿಶುವನಿಂತಗ್ಗಿಸುವರೇ ಎಂದು ಕರಗುತಂ |
ಇರ್ಪಾಗಳಲ್ಲಿ ಬಸವನ ಬಲದ ಕಣ್ ಕೆತ್ತೆ
ಕೂರ್ಪರ ದಕ್ಷಿಣಭುಜಂ ಭರದಿಂದ ಮಿಗೆ ಕೆತ್ತೆ |
ಇಂದೆನ್ನ ಮನೆಗೆ ಶರಣರ ಬರವು ನಿಶ್ಚಯಂ
ಇಂದೆನ್ನ ಭಕ್ತಿ ಫಲವಾಯ್ತು ನಿಸ್ಸಂಶಯಂ |
ಎನುತಮಿರೆ ಬರುತಿರ್ದುದಮ್ಮಮ್ಮ ಗಣಕುಲಂ
ಮನಸಿಜಸ್ತಂಬೇರವೋಗ್ರಸಿಂಹನ ಬಲಂ |

---

[1] ನರ್ ಕರ್ಣ (ಖ.), ನಾರ್ಕಸುತ ? ; [2] ನು (ಕ.)

ಬರೆ ದೂರದಿಂ ಕಂಡು ಬಸವರಾಜಂ ನೋಡಿ
ಶರಣರ್ಗೆ ಕೈನೀಡಿ ತೋಱಿದ ಮನಂಗೂಡಿ |
ಈಬಂದುದಿದೆ ಚೋಳದೇಶದ ಮಹಾಗಣಂ
ಆಬಂದುದೇ ಪಾಂಡ್ಯ ಕೇರಳದಿಶಾಗಣಂ |
ಇದು ಗೌಳದೇಶದ ಗಣಾವಳಿಯ ಸಂಭ್ರಮಂ
ಅದು ಮಾಳವದ ಮಹಾಗಣಕುಲದ ವಿಭ್ರಮಂ |
ಇದು ವಂಗ ಬಂಗಾಳ ಲಾಳದೇಶದ ಗಣಂ
ಇದು ಕಳಿಂಗಂ ಮಹಾರಾಷ್ಟ್ರದೇಶದ ಗಣಂ |
ಇದು ತುಳುವ ಮಲೆಯಾಳದೇಶಗಣದೊತ್ತೊತ್ತಿ
ಇದು ತೆಲುಗು ತಿಗುಳು ಬರ್ಬರಗಣದ ಸಂಪತ್ತಿ |
ಇತ್ತಲಿದೆ ಸಿಂಗಣದ್ವೀಪದ ಗಣವ್ರಾತ
ಇತ್ತಲಿದೆ ಕಾಶ್ಮೀರದೇಶದ ಶರಣಜಾತ |
ಎಂದೆಂದು ತೋಱುತ್ತವಾರುತ್ತೆ ಬೊಬ್ಬಿಡುತೆ
ಮುಂದೈಪ ಪುಳಕದಿಂ ಕಳಿಯೇಱಿ ಕೂಗಿಡುತೆ |
ಒಲಿದೊಲಿದು ಮಲೆಮಲೆದು ನಲಿನಲಿದು ಕೆಲೆಕೆಲೆದು
ಒ[1][ಲೆ]ದು ನಾಲ್ಕುಂದೆಸೆಗೆ ಕೊಣಕಿಟ್ಟು ಕುಕಿಲಿಱಿದು |
ಹಬ್ಬಿ ಹಾರೈಸಿ ತೇರೈಸಿ ತೆಕ್ಕನೆ ತೀವಿ
ಉಬ್ಬಿ ಪು[2]ಟ[2]ವೆದ್ದು ನೆಱೆ ಕೂರ್ಬಿ ಗರ್ಜಿಸುತೋವಿ |
ಸಂತೈಸಿಕೊಳಲಾಱದಲ್ಲಿ ಪರಿಪರಿದಾಡಿ
ಮುಂತೆ ಬಾಹಾಸ್ಫಾಳಸಂಗೆಯ್ದು ಕುಣಿದಾಡಿ |
ಬಸವನಿರೆ ಕಂಡು ಗಣಸಂಕುಳಂ ಮುಂಡಾಡಿ
ಹೊಸಪರಿಯ ಕೌತುಕದ ಪರಕೆಯಿಂ ಕೊಂಡಾಡಿ |
ಭಕ್ತರ ಬಳಲ್ಕೆ ಕಂಡಾಗಳೇ ನೆಱೆ ಹೋಯ್ತು
ಭಕ್ತ ಬಸವಣ್ಣನಂ ಮುಟ್ಟೆ ಮಿಗೆ ತಣಿವಾಯ್ತು |

---

1 ಲಿ (ಕ.ಖ.) ; 2 ಠ (ಖ.)

ಆಗಳಾ ಬಸವನೆಲ್ಲರ್ಗೆ ಗದ್ದುಗೆಯಿತ್ತು
ರಾಗದಿಂ ಕೈಮುಗಿದು ಕಿಂಕರತೆಯಂ ಹೊತ್ತು |
ಶರಣರ ಶ್ರೀಪದಪ್ರಕ್ಷಾಲನಂಮಾಡಿ
ಹರುಷದಿಂ ಚರಣಜಲಮಂ ಕರಣದೊಳು ಕೂಡಿ |
ಎಲ್ಲರ್ಗೆ ಬೇಱೆ ಸಿಂಹಾಸನವನೊಲಿದೀವ
ಎಲ್ಲರ್ಗೆ ಬಸವನಗ್ಘಣಿಗಳಂ [1]ತಾನೀ[1]ವ |
ಸಮಯದೊಳಗಲ್ಲಿ ಕೆಲಬರ್ [2]ಡಂಬ[2]ಕರ್ ಬಂದು
ಅಮರ್ದು ಬಸವಣ್ಣನಂ ಬಂದಿವಿಡಿಯಲ್ಕೆಂದು |
ಬಱುಮನದ ಹೊಱವಿಭೂತಿಯನಲ್ಲಿ ತೀವಿಟ್ಟು
ತುಱುಗಿ ಮೈಯೊಳಗೆ ರುದ್ರಾಕ್ಷೆಗಳ ನೆಱೆ ತೊಟ್ಟು |
ವೃಂತಫಲಮಂ ಸಮಂತಂದು ಕಕ್ಷದೊಳಿರಿಸಿ
ಅಂತವರ್ಗೆ ಬಸವ ಹೂವಗ್ಘಣಿಯ ತಂದಿರಿಸಿ |
ಪಿಡಿದುಕೊಂಡಿರೆ ಕಂಡು [3]ಬೆಬ್ಬಳಿಸಿ ನೋಡು[3]ತಂ
ನಡುಗುತೊಬ್ಬೊಬ್ಬರ ಮೊಗಂಗಳಂ ನೋಡುತಂ |
ಸಂಚಳಿಸುತಿರೆ ಮಿಕ್ಕುವಿಾಱು ತಮ್ಮೆಲ್ಲರಂ
ಮುಂಚಿ ಬಸವನ ಭಕ್ತಿ ಬಂದಿವಿಡಿಯಲ್ ಕರಂ |
ಬೆಳಗಾಗುತಿರೆ ಬಸವನಱಿದಿದೇನೆಲೆ ದೇವ
ಆಳೊಡನೆ ಸರಸವೇನೆಲೆಲೆ ಸಂಗಮದೇವ |
ಅಂಜುವರೆ ದೇವ ಸೆಜ್ಜೆಯನು ಉಪ್ಪರಿಸಿಮೆನೆ
ಅಂಜದಳುಕದೆ ಬಸವನಲ್ಲಿ ಕರುಣಿಸುವುದೆನೆ |
ಬಸವಭಾವಂ ಬಲಿದು ಮುನ್ನವೇ ಸೆಜ್ಜೆಯೊಳು
ಎಸೆವ ಲಿಂಗಂಗಳಾಗುತ್ತುಮಿರೆ ಸೆಜ್ಜೆಯೊಳು |
ತೊಟ್ಟು [4]ಪಿಂಡಿಗೆ[4]ಯಾಗೆ ಫಲಮೆ ಲಿಂಗಮದಾಗೆ
ಇಟ್ಟಣಿಪ ಚಂದ್ರಕಾಂತದ ಕಾಂತಿ ನೆಲೆಯಾಗೆ |

---

[1] ತಂದೀ (ಖ.); [2] ವಂಚ (ಖ.); [3] ಕಂಡು ಬೆಬ್ಬಳಿಸು (ಕ.); [4] ಪಿಡಿಕೆ (ಖ.)

ನೋ[1]ಡೆ ವೇದಾ[1]ದೀಕ್ಷೆಯಾದುದಾ ಡಂಬರಿಗೆ
ನೋಡೆ ಬಸವನ ಕರುಣವೊದಗಿತ್ತು ಮೂರ್ಖರಿಗೆ |
ಮುನಿಪುಂಗವರ್ ಬಸವಕರುಣಮಂ ಪಡೆವರೇ
ಮನುಕುಲಂಗಳ್ ಬಸವದೀಕ್ಷೆಯಂ ಪಡೆವರೇ |
ಬಂದಿ ಶಿವಬಂದಿ [2]ಸಂಬಂಧಿ[2]ಯಾದುದು ನಿಮಗೆ
ಬಂದಿಯಂ ಹರಭಕ್ತಿ ಬಂದಿವಿಡಿದುದು ಧರೆಗೆ |
ಎನುತೆ ಗಣನಾಯಕರ್ ಕೌತುಕಂಬಡುತಮಿರೆ
ತನತನಗೆ ತಲೆದೂಗಿ ಬೆಱಗಾಗಿ ನೋಡುತಿರೆ |
ಭವಿತನಂ ತೊಲಗಿ ಸದ್ಭಕ್ತಿಯಿಂಬಾಗಿ ಇರೆ
ಶಿವಕರುಣದಿಂ ಜನನಮರಣಮಂ ನೀಗುತಿರೆ |
ಇಂತು ಬದಣೆಯ ಕಾಯಿ ಲಿಂಗವಾಗುತ್ತಮಿರೆ
ಸಂತತಂ ಬಂದಿಕಾಱರ್ ಭಕ್ತರಾಗುತಿರೆ |
ಇದೆ ಮಜ್ಜನಕ್ಕೆಱೆಯಿರೇ ಸಂಗಮಂಗೆಂದು
ಹರನ ಕರುಣಂಬಡೆದು ಸುಮ್ಮನಿರಬೇಡೆಂದು |
ಅಂದಿಂದ ಬಸವನಾ ಹೆಸರ ಫಲಮಂ ಮುಟ್ಟ
ಎಂದುವುಂ ಡಂಬಕರ [3]ಹೋದ[3] ದೆಸೆಯಂ ಮೆಟ್ಟ |
ಆಗಳಾ ಭಕ್ತತತಿ ಬಸವನಂ ನೆಱೆ ನೋಡಿ
ರಾಗದಿಂದಪ್ಪಿ ಮತ್ತಪ್ಪಿ ತಣಿಯದೆ ನೋಡಿ |
ನೀನೊಲಿದು ನೋಡಿ[4]ತ್ತೆ[4] ಶಿವಲಿಂಗವೆಲೆ ಬಸವ
ನೀನೊಲಿದು ನೋಂಕಿದವನೇ ಭಕ್ತನೆಲೆ ಬಸವ |
ನಿನ್ನ ಮನದಿಂದ ಚಿಂತಾಮಣಿಯದಾಯಿತ್ತು
ನಿನ್ನ ಕರಮಂ ಕಂಡು ಕಲ್ಪತರುವಾಯಿತ್ತು |
ನಿನ್ನ ಪದರಜದಿಂದೆ ಪರುಷವದು ಹುಟ್ಟಿತ್ತು
ನಿನ್ನ ಶೀಲಂಗಂಡು ಸುರಭಿ ಹಯನಾಯಿತ್ತು |

---

[1] ಡಿ ವೇದಾದಿ (ಖ.); [2] ಸರ್ಬಂದಿ (ಕ.); [3] ಹೊದ್ದ (ಕ.); [4] ತೇ (ಕ.)

ಚಾಗಿಗಳ ನಡುವೆ ಕಡುಚಾಗಿ ಸಂಗನಬಸವ
ಭೋಗಿಗಳ ನಡುವೆ ಮಿಗೆ ಭೋಗಿ ಸಂಗನಬಸವ |
ಚೆಲುವ ಸಂಗನಬಸವ ಒಲಿವ ಸಂಗನಬಸವ
ಗೆಲುವ ಸಂಗನಬಸವ ಸೋಲ್ವ ಸಂಗನಬಸವ |
ಕಾವ ಸಂಗನಬಸವ ಈವ ಸಂಗನಬಸವ
ದೇವ ಸಂಗನಬಸವ ತುಂಬಿ ತುಳುಕದ ಬಸವ |
ತಾಗಿ ಮರಳದ ಬಸವ ಬೀಗಿ ಬೆದಱದ ಬಸವ
.... .... .... .... |
ಎಂದು ಶಿವಶರಣಸಂಜಾತ ಹೊಗಳುತ್ತಮಿರೆ
ಅಂದು ಕುಗುಗುಗುಗುಕೂ ಎಂದು ಕೂಗುತ್ತಮಿರೆ |
ಸಂದಣಿಸುತೆಲ್ಲರ್ಗಳೀಸೆಂಬನಿತಱೊಳಗೆ
ಸಂದ ಪುಯ್ಯಲ್ ಪುಟ್ಟಿದೇಸೆಂಬ ನುಡಿಯೊಳಗೆ |
ಹೆಗಲ ಕಂಬಳಿ ಕೈಯ ಕಲ್ಲಿಯೋಗರದಿಂದೆ
ಮೊಗ ಬೆಮರೆ ತೇಕುತಂ ಪರಿತಂದು ಕಡುಪಿಂದೆ |
ಪಿಡಿದ ಗೋವಳಿಗೋಲ ಮಾಲೆಗಳ ಹಾಹೆಯಿಂ
ತೊಡರ ಬಾ[1]ವು[1]ಲಿಯೊಳಗೆ ಜವಿ ಹಲವು ದಂಡೆಯಿಂ |
ಗುರುಗಂಜಿಯಿಂ ಸಮೆದ ದಂಡೆ ಮುಂಡೆಯೊಳೊಪ್ಪೆ
ಕರಮೆಸೆವ ಚೆನ್ನಗುಳ್ಳೆಯ ಚೀರದಿಂದೊಪ್ಪೆ |
ಕಿವಿಯಲಿಕ್ಕಿದ ಬಳಹದೋಲೆ ಹಳದಿಯ ಉಡುಗೆ
ಸವೆಯದೂದುವ ಕೊಳಲು ಮೈಯ ತವರದ ತೊಡಿಗೆ |
ಎಸೆವುತಿರೆ ಬಂದು ಮಹಮನೆಯ ಗೋವಳನಲ್ಲಿ
ದೆಸೆದೆಸೆಗೆ ಕಂಪಿಸುತೆ [2]ಕ[2]ಂಠಣಿಸುತಂತಲ್ಲಿ |
ನಿಂದು ಬಸವಂಗೆ ಬಿನ್ನೈಸಿದಂ ತಾನಂದು
ಇಂದು ಭಕ್ತರ ವೇಷದಿಂದ ಕಳ್ಳರ್ ಬಂದು |

---

[1] ಹು (ಕ.); [2] ಟ (ಕ.)

ಕೀಲಾರಮಂ ಕೊಂಡುಹೋದರಿಂದೆಲೆ ದೇವ
ಮೇಲಪ್ಪ ಗೋಕುಲವನ್ನೈದೆ ಕೊಂಡರು ದೇವ |
ಎನೆ ಮರುಳುಗೋವಳಾ ಭಕ್ತರೇಂ ಕಳ್ಳರೇ
ನಿನಗೇಸು ತಮ್ಮೊಡವೆಯುಂ ತಾವೆ ಕೊಳ್ಳರೇ |
ಶಿವವೇಷಮುಂ ಕಳವುಮೊಂದೆಡೆಯೊಳಿಪ್ಪುದೇ
ಶಿವಭಕ್ತರಲ್ಲದಾರುಂ ಕೊಳಲ್ ಬಪ್ಪುದೇ |
ಸಂಗನೇ ಕೊಂಬವಂ ಸಂಗನೇ ಕೊಡುವವಂ
ಸಂಗನೇ ಉಂಬವಂ ಸಂಗನೇ ಉಡುವವಂ |
ತಾಯ್ಗಳುಮ್ಮಳಿಸಲಾಗದು ಕಱುಗಳಂ ಬಿಡಿರೆ
ಬೇಗ ನೊಲೆತೊರೆದು ಮಱುಗುವ[1]ವು ಕಱುವಂ[1] ಬಿಡಿರೆ |
ಮಕ್ಕಳುಗಳವ್ವೆಗಳು ನೋಯಲಾಗದು ಬಿಡಿರೆ
ಮಿಕ್ಕ ನೆನಹಿಂ ಮಲಮಲಂಮಱುಗುವವು ಬಿಡಿರೆ |
ಎಲೆಲೆ ತಾಯಾ ಕಱುಗೂಡಿರೇ ಬೇಗದೊಳು ಬಿಟ್ಟು
ಎಲೆಲೆ ಅಗಲಿರಲಾರ್ಪವೇ ಮಕ್ಕಳಂ ಬಿಟ್ಟು |
ಎಂದು ಕಱುಗಳನಲ್ಲಿ ಬಿಡಿಸುತೆ ದಯಾಪರಂ
ಹೊಂದದಾನಂದಾಶ್ರುಜಲಪೂರ್ಣನಿರ್ಝರಂ |
ಶರಣರೊಡನೊಲುಮೆಯಿಂ ಲಿಂಗಾರ್ಚನಂಗೆಯ್ದು
[2]ತರತರ[2]ದೊಳವರನಾರಾಧಿಸುತೆ ಬೆಸಕಯ್ದು |
ಹರುಷದಿಂದಂ ಮೃಡಪ್ರಸಾದಮಂ ಕೈಕೊಂಡು
ಪರಮಸುಖಿಯಾಗಿ ಶರಣರ ನೇಹವೆಡೆಗೊಂಡು |
ಶರಣರೆಲ್ಲಂ ಸ್ವೇಚ್ಛೆಗಾನಂದದಿಂ ಪೋಗೆ
ವರಭಕ್ತ ಬಸವಂಗೆ ನಸುನಿದ್ರೆಗೆಡೆಯಾಗೆ |
ಸಜ್ಜೆವನೆಯೊಳಗೆ ಮೃದುವೆನಿಪ ತಳ್ಪದ ಮೇಲೆ
ಸಜ್ಜನಂ ನೆಲಸಿ ತೂಕಡಿಕೆ ಮನವಂ ಜೋಲೆ |

---
[1] ಕಱುಗಳಂ (ಖ.) ; [2] ಕರತಳ (ಖ.)

ಜಂಗಮಸಮಾಧಿ ತನಗೆಂಬಂತೆ ಕಣ್ಮುಚ್ಚಿ
ಲಿಂಗದಂಘ್ರಿಯ ಸೋಂಕ[1]ಲ[1]ಂಗುಲಿ ಕರಂ ನಚ್ಚಿ |
ಉಸಿರಲ್ಲಿ ಶರಣಾರ್ಥಿ [2]ಎಂದೆಂದು[2] ಸುಳಿವುತಿರೆ
ಅಸುವಿನೊಳು ಸಂಗಸುಂ ಶರಣರುಂ ನೆಲಸುತಿರೆ |
ನಿದ್ರೆಯೊಳಿರ್ದನಾ ಬಸವನಸುರಾಗದಿಂ
ಚಿದ್ರೂಪದಿಂ ಶಿವನನರ್ಚಿಪುದ್ಯೋಗದಿಂ |
ಇರೆ ದೂರ[3]ದೇಶಾಂತರಪ್ರವಾಸ[3]ದೊಳಂದು
ಶರಣರೈತಂದರಾ ಬಸವದರುಶನಕೆಂದು |
ಬಂದು ಬಾಗಿಲೊಳಿರ್ದ ಪಡಿಯರನಾದರಿಸೆ
ಸಂದ ನಿದ್ರೆಯೊಳಿರ್ದನೆಂದವರು ಬಿನ್ನೈಸೆ |
ಸಮಯವಿಲ್ಲೆನಲಮ್ಮದಿರ್ದ ಪರಿಯಿದು ದೇವ
ಸಮಯವಂ ಬಸವನಂ ನೀವೆ ಬಲ್ಲಿರಿ ದೇವ |
ಕರುಣಿಸುವುದೆನೆ ಬಂದು ತಿರಿಗಿದರ್ [4]ಕೈ[4]ಯೊಡನೆ
ತಿರಿಗೆ ತಿರಿಗಿದುದು ಬಸವನ ಜೀವವರೊಡನೆ |
ಶರಣಾರ್ಥಿಯೆಂಬ ನುಡಿ ಶರಣರೊಳು ಸೇರಿತ್ತು
ಪುರದೊಳಗೆ ನಡೆ[5]ಯೆ ಬಳಿವಳಿ[5]ಯಾಗಿ ನಡೆಯಿತ್ತು |
ಮತ್ತಲ್ಲಿ ಬಸವರಾಜನ ಸತಿಯರೆಯ್ತಂದು
ಹೊತ್ತು ಹೋಯಿತ್ತೇಳಿರೇ ಶಿವಾರ್ಚನೆಗೆಂದು |
ತೊಡೆವೊಯ್ದು ಮೆಲ್ಲನೆಬ್ಬಿಸೆ ಸುಮ್ಮನಿರುತಮಿರೆ
ನಿಡುಮುಸುಕನೋಸರಿಸೆ ದೇಹದುಸಿರಿಲ್ಲದಿರೆ |
ಕಟ್ಟಿ ಗುಡಿಯಂ ಸಂಗನೊಳಗೆ ಸಂದಂ ಬಸವ
ನಿಷ್ಠೈಕಭಕ್ತರಿಗೆ ಪೇಳದೊಲವಿಂ ಬಸವ |
ಎನೆ ಮನೆಯೊಳಿರ್ದ ಶಿವಭಕ್ತರೆಲ್ಲರ್ ಬಂದು
ತನತನಗೆ ಬಸವನಂ ಮುಟ್ಟಿ ನೋಡುತ್ತಂದು |

---

[1] ನ (ಕ.) ; [2] ಯೊಂದಲ್ಲಿ (ಖ.) ; [3] ದಂತರ ಪ್ರವಾಸ (ಕ.), ದೇಶಾಂತರಪ್ರವೇಶ (ಖ.) ; [4] ಕಯಿ (ಖ.) ; [5] ಯೆಂಬ ಬಳಿ (ಖ.)

ಇರ್ದವರೊಳೊರ್ಬ ಭಕ್ತಂಗೆ ಸರ್ವೇಶ್ವರಂ
ಸಾರ್ದು ದಯೆಯಿಂ ಸೂಚಿಸುತ್ತಮಿರೆ ಶಶಿಧರಂ |
ಅಱಿದು ಶರಣರು ಹೋ ವಿಚಾರವುಂಟೆಂದಲ್ಲಿ
ಹೊಱಗೆ ಬಾಗಿಲ ಕಾವನಂ ಕರೆಯಿಸುತ್ತಲ್ಲಿ |
ಶಿವಭಕ್ತರಱಸಿ ಹೋದವರುಂಟೆ ಬಸವನಂ
[1]ಶಿವಶರಣರೇ[1] ಹರಣವಾಗಿ ಧರೆಗೆಸೆವನಂ |
ಎಂದಡುಂಟುಂಟು ಭಕ್ತರ್ ಬಂದರೆಲೆ ದೇವ
ಬಂದಲ್ಲಿ ಸಮಯವಿಲ್ಲೆನೆ ಹೋದರೆಲೆ ದೇವ |
ಎಂಬ ನುಡಿಗೇಳ್ದು ತಪ್ಪದು ಬಸವನಿರ್ದಪಂ
ಅಂಬಕತ್ರಯನಣುಗರೊಡನೆ ಪೋಗಿರ್ದಪಂ |
ಅಂತವರ್ ಬರೆ ಬಂದಪಂ ಬಸವನೆಂದೆನುತೆ
ಮುಂತೆ ಪರಿದರು ಕೇರಿಕೇರಿಗಿದು ಪೊಸತೆನುತೆ |
ಬಸವನ ಪ್ರಾಣಮಂ ಪರಿದಱಸುವಂದದಿಂ
ಬಸವನಸುವಂ ಪುರದೊಳಾರೈವ [2][ಚೆ]ಂದದಿಂ |
ಬಂದು ಕಂಡರು ಪುರಕೆ ಹೊಚ್ಚಹೊಸ ಭಕ್ತರಂ
ನಿಂದು ಕಂಡರು ಬಸವನ ಪ್ರಾಣಯುಕ್ತರಂ |
ಅಲ್ಲಿ ಕಾಣುತ್ತೆ ಬರಲಿಲ್ಲಿ ಚೇತನವಾಯ್ತು
ಅಲ್ಲಿ ನಡೆತರುತಮಿರಲಿಲ್ಲಿ ಉಸಿರುಂಟಾಯ್ತು |
ಅಲ್ಲಿ ಬಾಗಿಲ್ಗೆ ಬರಲಿಲ್ಲಿ ಮೈಮುರಿದೆದ್ದು
ಮೆಲ್ಲನೈತಂದು ಮುಂಗೆದಱ ನೆಱೆ ಕಣ್ದೆಱೆದು |
ಜಂಗಮಪ್ರಾಣಿ ಶಿವಭಕ್ತಿ ಕಣ್ದೆಱೆವಂತೆ
ಸಂಗಮೇಶ್ವರನ ಕಡುನಿಷ್ಠೆ ಕಣ್ದೆಱೆವಂತೆ |
ಇರೆ ಶರಣರೆಲ್ಲ ಬೆಱಗಾಗಿ ಕೌತುಕವೇಱ
ಧರೆಗೆ ಹೊಸತೆಂದೆನುತೆ ನುಡಿದರಾಗಳ್ ಮಿಱ |

---

[1] ಭವನ ಶರಣರ (ಕ.); [2] ಭ (ಕ.ಖ.)

ಎಲೆ ಬಸವರಾಜ ಶರಣರು ಪೋಗೆ ಪೋಪರೇ
ನೆಲದೊಳಿದು ಚೋದ್ಯವಿಂತುಸಿರಿಲ್ಲದಿಪ್ಪರೇ |
ಎನೆ ಬಂಜೆ ಬೇನೆಯಱಿಯದವೊಲೀ ನುಡಿಯುಂಟೆ
ಎನಗೆ ಆಯುಂ ಶ್ರೀಯುವೊಡೆಯರೇ ಬೇೞುಂಟೆ |
ಶರಣತತಿ ಹೋಹುದೇ ಎನ್ನ ಹರಣದ ಹೋಗು
ಶರಣಬರವೇ ಎನ್ನ ಹರಣದ ಬರವಿನಾಗು |
ಎಂದು ಹಾಡುತ್ತವಾ ಭಕ್ತರಂ ಬಿಗಿಯಪ್ಪಿ
ನಿಂದು ನೆಱೆ ತನ್ನ ಹರಣಂಗಳಂ ಬಿಗಿಯಪ್ಪಿ |
ತಂದು ದೇವಾರ್ಚನೆಯ ಮನೆಯೊಳಗೆ ಕುಳ್ಳಿರಿಸಿ
ಸಂದ ಪನ್ನಿಚ್ಚಾಸಿರೊಡೆಯರಂ ಸೈತಿರಿಸಿ |
ನಡುವೆ ಸಂಗಮದೇವರರ್ಚನೆಗೆ ತಾನಿರ್ದು
ಎಡಬಲದ ಶರಣರಂ ನೋಡಿ ಪುಳಕಿಸುತಿರ್ದು |
ಕೂಡಗ್ಘವಣಿ ಪುಷ್ಪ ಧೂಪ ದೀಪಂಗಳಂ
ಕೂಡೆ ಆರೋಗಣೆಗೆ ದಿವ್ಯಾನ್ನತತಿಗಳಂ |
ಕೊಟ್ಟು ಸುಖದಿಂದ ಪ್ರಸಾದಮಂ ಕೈಕೊಂಡು
ಕಟ್ಟಧಿಕರೆನಿಪ ಶರಣರ ಕರುಣಮಂ [1]ಕೊಂ[1]ಡು |
ನೆನೆನೆನೆದು ಪುಳಕಿಸುತೆ ಗೀತಮಂ ಪಾಡುತಂ
ಮುನಿದು ಸಂಗಂಗೆ ಹೊಸ ಗೀತಮಂ ಪಾಡುತಂ |
ಮೂದಲಿಸಿ ಹಾಡುತಂ ಮುದ್ದಿಸುತೆ ಹಾಡುತಂ
ಆದರಿಸಿ ಹಾಡುತಂ ಮೇರೆಗೆಡೆ ಹಾಡುತಂ |
ಗೀತಂಗಳೊಳಗೇಕನಿಷ್ಠೆ ಹೊಳೆಹೊಳೆವುತಿರೆ
ಗೀತಂಗಳೊಳಗಭವಭಕ್ತಿ ಬೆಳಬೆಳೆವುತಿರೆ |
ಗೀತದೊಳು ಸಂಗನಾಧಿಕ್ಯವೊಪ್ಪುತ್ತಮಿರೆ
ಗೀತದೊಳು ಶರಣರ ಸಮಗ್ರವೇ ಜಿಗಿಲುತಿರೆ |

---

[1] ಕಂ (ಖ.)

ಗೀತದೊಳು ಪರದೈವಶೋಷಣಂ ತೋಱುತಿರೆ
ಗೀತದೊಳು ಪರಸಮಯಭೀಷಣಂ ಪೊಣ್ಮುತಿರೆ |
ಗೀತಂ ಶಿವಂಗೆ ಕರ್ಣಾಭರಣವಾಗುತಿರೆ
ಗೀತವೀಶನ ದಯಾಕರುಷಣವದಾಗುತಿರೆ |
ಹಾಡುತಂ ಶರಣರೊಳು ಬಸವಣ್ಣನೊಪ್ಪಿದಂ
ಆಡುತಂ ಭಕ್ತನಿಧಿ ಬಸವಣ್ಣನೊಪ್ಪಿದಂ |
ಅಮಮ ದಂಡಾಧಿಪಕಿರೀಟಪದನೊಪ್ಪಿದಂ
ಅಮಮ [1]ಚಲಿ[1]ನಾಯಕರ ದೇವನಿಂತೊಪ್ಪಿದಂ || ೨೧೦

---

[1] ಛವಿ (ಖ.)

## ಹತ್ತನೆಯ ಸ್ಥಲ

ಬಸವನ ಗೀತವಂಬುಧಿಪರೀತಧರಾತಳದಲ್ಲಿ ಸಂದುದೆಂ-
ದುಸಿರ್ವುದಿದಾವುದೊಂದರಿದು ಪನ್ನಗಲೋಕದ ದ್ವಾರವಟ್ಟದೊಳ್ |
ದೆಸೆಗಳ ಭಿತ್ತಿಯೊಳ್ ದಿಗಿಭದಂಗದೊಳಿಂದ್ರಸ ಜಿಹ್ವೆಯೊಳ್ ಶಿವಾ-
ವಸಥದ ಬಾಗಿಲಲ್ಲಿ ಬರೆದಿಪ್ಪುದದೆಂದೆಸಲೊಪ್ಪದಿಪ್ಪುದೇ || ೧*

ಗೀತಂ ಸಂಗಸ್ತುತಿಸಂ-
ಗೀತಂ ಗೀತಂ ವಿಶಾಲವಸುಧಾ[1]ಪೂ[1]ತಂ |
ಗೀತಂ ಶರಣ[2]ರ ಗಣ[2]ವಿ-
ಖ್ಯಾತಂ ಸಂಪ್ರೀತಿ[3]ಯಾದ[3] [4]ಗೀ[4]ತಂ ಸೂತಂ || ೨*

ಗೀತಂ ವೇದಾಂತಾರ್ಥ-
ವ್ರಾತಂ ಗೀತಂ ಸಮಸ್ತ[3]ಶಾಸ್ತ್ರೋ[3]ಪೇತಂ |
ಗೀತಂ ಸಕಳಾಗಮಕುಳ-
ಜಾತಂ ಗೀತಂ[5] ಪರೈಕಭಕ್ತಿ[5]ಸಮೇತಂ || ೩*

ಎಂದಿಂತು ಗೀತಮಂ ತನ್ನ ಸಾಮರ್ಥ್ಯಮಂ ಕೊಂಡಾಡುತಿಪ್ಪ ಪರಮಮಾಹೇಶ್ವರರ ಕರುಣಮಂ ಕೈಕೊಂಡು, ಪನ್ನಿಚ್ಛಾಸಿರ ಮನ್ನಣೆಯ ಭಕ್ತರ ನಡುವೆ ಸನ್ನಿಹಿತನಾಗಿ ಬಸವಿದೇವಂ ಸುಖದಿಂದಮಿರ್ದೊಂದು ದೆವಸಂ ಶರಣಕುಲಮಂ ಪಾರ್ದಿರ್ಪ ಸಮಯದೊಳು; ಬರುತಿರ್ದಪರೆಂಬ ಭಾವದೊಡನೆ ಪುಳಕಂ ಪುಟವೇಱೆ ಭೋಂಕನೆದ್ದುನ್ನತಾಸನವೇಱಿ, ಪಲ್ಲವಸತ್ತಿಗೆ ಮೇಲ್ಮಸಗೆ ಕೆಲಬಲನ ಪರಿಜನಂ ಸೆಲನನುಗ್ಘಡಿಸೆ ಚಾಮರಸೀಗುರಿಗಳಿಕ್ಕೆಲದೊಳಲ್ಲಾಡೆ ಶಂಖಧ್ವನಿಯುಣ್ಮೆ, ಶಿವಭಕ್ತಪಾದಶೇಖರನೆಂಬ ಶರಣಜನವನವಸಂತನೆಂಬ ಭಕ್ತಜನಬಾಂಧವನೆಂಬ ಬಿರುದಿನ ಕಹಳಾರವಂ ದೆಸೆದೆಸೆಗೆ ಪಸರಿಸೆ, ಪುರಮಂ ಪೊಱಮಟ್ಟು

---

[1] ಸೂ (ಖ.); [2] ಗಣದ (ಗ.ಘ.); [3] ತಂತ್ರೋ (ಖ.) ನೀತಿ (ಗ.ಘ.);
[4] ನೀ (ಖ.); [5] ಪರಾಪರೈಕ (ಕ.ಖ.) ಪರಾಪರೈಕಭಕ್ತಿ (ಘ.)

ಹಿರಿಯ ಮಾಹೇಶ್ವರರ ಕೇರಿಗಳ ಕೆಲದೊಳು ನಡೆತಪ್ಪಾಗಳು—ಓಹಿಲಯ್ಯಂಗೆ ಹಿತಾರ್ಥ, ಉದ್ಭಟಯ್ಯಂಗೆ ಹಿತಾರ್ಥ, ಬಸವರಾಜಂಗೆ ಹಿತಾರ್ಥ, ಆರೋಗಿಸು—ಎಂದೆಂಬ ಶಿವಲಿಂಗಾರೋಗಣೆಯ ಸಮಯ ಸರ್ವಮಂಗಳರಚಿತಪರಿಣಾಮಪೂರಿತದಿವ್ಯವಾಕ್ಯಂಗಳಂ ಘಂಟಾನಾದದೊಡನೆ ಕೇಳ್ದು, ಕರಣಂ ಕಳೆಯೇಱೆ ಸಿರಿಮೊಗಂ ಸಂಪದವೇಱೆ ದಂಡಿಗೆಯಿಂ ಘಳಿಲನಿಳಿದು, [1]ಕಂಬಳಿಯ[1] ನಾಗಿದೇವನೆಂಬ ಹಿರಿಯ ಮಾಹೇಶ್ವರನ ಮನೆಯಂ ಪೊಕ್ಕು, ಸಂಗಪ್ರಸಾದವನವರ ಪ್ರಸಾದವೆರಸಿ ಕೈಕೊಳುತ್ತಿರೆ;

ಇತ್ತಲೊಡನೆ ಬರುತ್ತಿರ್ಪ ವೈಷ್ಣವರ ಬೇಹಿನ ಸಾಹಸಿಗನೊರ್ವಂ ಪುರಕೆ ಪರಿತಂದು ಬಸವನ ಚರಿತ್ರಮನಜ್ಞಾನಿಗಳಪ್ಪ ವಿಪ್ರಕುಲಕ್ಕೆ ಪೇಳೆ; ಕೇಳ್ದು ಸಂಭ್ರಮದಿಂ ಸಡಗರಿಸುತ್ತಂ, ನಾರಣಕ್ರಮಿತಂ ಕೃಷ್ಣಪೆದ್ದಿ ವಿಷ್ಣುಭಟ್ಟಂ ಕೇಶವಭಟ್ಟಂ ವಿಷ್ವಕ್ಸೇನಭಟ್ಟಂ ಮುರಾರಿಕ್ರಮಿತಂ ಸೌರಿಪೆದ್ದಿ ಮುಕುಂದಭಟ್ಟಂ ಪದ್ಮನಾಭಕ್ರಮಿತಂ ಗೋವಿಂದಪಂಡಿತಂ ಧರಣೀಧರಭಟ್ಟಂ ವೈಕುಂಠಪೆದ್ದಿ ಜಲಶಯನಕ್ರಮಿತಂ ದಶಾವತಾರಭಟ್ಟಂ ಜನಾರ್ದನಪೆದ್ದಿ ವಾಸುದೇವಷ್ಟೈಸಂ ಅಚ್ಯುತಕ್ರಮಿತಂ ದಾಮೋದರಭಟ್ಟಂ ಮೊದಲಾದ ಛಾಂದಸರು ವೇದಜಡರು ಮಟ್ಟಿಯ ಮರುಳ್ಗಳು ವೃ[2]ಥೋ[2]ತ್ಸಾಹಿಗಳು ಹಬ್ಬೇಳಿಗಳು ದರ್ಭೆಯ ನಿರ್ಭಾಗ್ಯರೆಲ್ಲಂ ನೆರೆದರಮನೆಗೆ ಬಂದು—ದೇವದೇವ, ಎಲೆ ಭೂಪ, ಎಲೆಲೆಲೆ ಬಿಜ್ಜಳ, ಬಸವನ ನಡೆವಳಿ ದಿನದಿನಕ್ಕೆ ವಿಪರೀತಮಾಗಿರ್ದಪುದು. ಹಿರಿಯ ಮಾಹೇಶ್ವರರೆಂದು ಬೆರಸಿಕೊಂಡಿಪ್ಪುದಂತಲ್ಲದೆ, ಇಂದೀ ಗ[3]ಳಿಗೆಯೊ[3]ಳು ಹೊಲಗೇರಿಯೊಳೊರ್ವಂ—ಪೊಲೆಯಸಂದಡೆ ಕೋಪಂ—ಹಿರಿಯ ಭಕ್ತನ ಮನೆಯೊಳಗುಂಡುದಲ್ಲದೆ ನಿಸ್ಸೋಲಗದೊಳು ಪೊಲೆಗಲಸಲುಂ ಬಂದಪಂ. ಇಂತಾದಡೆಮಗಿರಲ್ಬಾರದು—ಎಂದು ಪೇಳ್ವರಂ ಸಂತೈಸಿ, ಬಸವನಂ ಕರೆಯಿಮೆಂದರಸಾಳ್ಗಳಂ ಕಳುಪುತ್ತಂ; ಬಸವರಾಜಂ ಬಂದೋಲಗದ

---

[1] ಸಂಬೋಳಿಯ (ಗ.), ಸಂಬೋಳಿಗೆಯ (ಘ.); [2] ತ್ತೋ (ಖ.); [3] ಳೀಗ (ಕ.ಗ.ಘ.)

ಮನೆಯಂ ಪೊಗುವನೆಂದು ರಾಜಾಂಗಣದ ಒಯಲೊಳು ಒಡ್ಡೋಲಗಂಗೊಟ್ಟು ಕುಳ್ಳಿರಲು ;

ಅಲ್ಲಿಗೆ ಜಂಗಮದಶಾವಸ್ಥಂ ಜಂಗಮಪ್ರಾಣಿಯೆನಿಪ ಸಂಗನ ಬಸವಂ ಬಂದು ನಿಂದಿರೆ, ಬಿಜ್ಜಳಂ ಕಂಡು—ಎಲೆ ಬಸವಣ್ಣಾ, ಸುವರ್ಣಂ [1]ಕ[ಮ್ಮಿ]ತಾ[1]ದಂತೆ ವಿಪ್ರಕುಲಕಸುಕೂಲಮಪ್ಪ ಶಿವಭಕ್ತಿ ಪೊದ್ದಿರ್ದು ಸದಾಚಾರದಿಂ ಸುಖಿಯಾಗಿರ್ಪುದನೊಲ್ಲದೆ, ಅತಿಭಕ್ತಿ ತಲೆಗೇಱಿ ಹಿರಿಯ ಮಾಹೇಶ್ವರರೆಂದು ಪೊಲೆಗಲಸಿ ಅವರ ಮನೆಯೊಳುಂಡುದಲ್ಲದೆ ಇಲ್ಲಿ ಬಂದು ಎಲ್ಲರಂ ಗೋಜಾಗತಂ ಮಾಳ್ಪುದು ಮಾರ್ಗವಲ್ಲ—ಎಂದು ವಿಪ್ರ[2]ಪ್ರೇ[ರಿತಂ][2] ನುಡಿಯೆ, ಬಸವರಾಜಂ ಕೇಳ್ದು—ಎಲೆ ಬುದ್ಧಿಯಿಲ್ಲದ ಭೂಪ, ಎಱಗಿವಿಯ ಮರುಳೆ, ನಾರಣಕ್ರಮಿತರ ಕೇರಿಯಂ ಪೊಕ್ಕೆನೆ ? ಮುಕುಂದಭಟ್ಟರ ಮನೆಯೊಳುಂಡೆನೆ ? ಸೌರಪೆದ್ದಿಗಳ ಸಾರಿ ನಿಂದೆನೆ ? ದಾಮೋದರಭಟ್ಟರಂ ಪ್ರೇಮದಿಂ ನೋಂಕಿದೆನೆ ? ಕೇಶವಪ್ಪೈಸರ ವಾಸನೆಯುಂಟೆ? ಹರನನಱಿಯದ ಹೊಲೆಯರ ಮನೆಯಂ ಹೊಕ್ಕುಂಡುದಿಲ್ಲ—ಎಂದು ಶಿವಪ್ರೇರಕಂ ನುಡಿದ ಮಾತಿನೊಡನೆ ಬಿಜ್ಜಳಂ ಕೋಪದೊಳುರಿದು—ಇಂತು ನುಡಿವರೆ, ಭಂಡಾರಿಬಸವ ? ವೇದಶಾಸ್ತ್ರಪುರಾಣಾಗಮಯುಜ್ಞವಿಧಿಯಿಂ ನಡೆವ ವಿಪ್ರರಂ ಹೊಲೆಯರೆಂದು ಶಿವಭಕ್ತನಾದ ಹೊಲೆಯನಂ ಉತ್ತಮನೆಂಬುದಕ್ಕೆ ಪ್ರಮಾಣೇನು ? ವಿಪ್ರರ ಮೈಯಂ ಕೊಯ್ಯೆ ನೆತ್ತರ್ ಸುರಿದು, ಭಕ್ತರ ಮೈಯೊಳು ಪಾಲ್ ಸುರಿದಪುದೆ ? ಬೇಡ ಬೇಡ, ಸಮಯಪಕ್ಷಪಾತದೊಳಪ್ಪುದೆಲ್ಲತಿರೇಕವೇಕೆ ? ಪದುಳಮಿರ್ದಡೆ ಸಾಲ್ಪುದು—ಎಂದರಸಂ ನುಡಿಯೆ, ಬಸವಣ್ಣಂ ಕೇಳ್ದು ನಸುನಗುತ್ತೆ ಆ ಮಾತಿಂಗೊಡಂಬಟ್ಟು—ತಪ್ಪದು ತಪ್ಪದೆಲೆ ಅರಸ, ನೀಂ ತಪ್ಪಿ ನುಡಿಯೆ. ನೀನೆಂದಂತೆ ವಿಪ್ರರ ಮೈಯೊಳು ನೆತ್ತರು ಭಕ್ತರ ಮೈಯೊಳು ಪಾಲ್ ಸುರಿಯದಿರ್ದಡೆ, ಸಂಗಂಗೆ ದೂರಂ, ಶರಣರ್ಗೆ ದೂರಂ, ನೋಡು ನೋಡರಸ, ನೀಂ ನೋಡಿನಿತು ಬೇಗಂ ಸೈರಿಸು—ಎಂದು ;

---

[1] **ಕಂಪಿತಾ** (ಕ.ಘ.), ಕಂಪಿತವಾ (ಖ.ಗ.) ; [2] ಪ್ರಕರಂ (ಕ.ಖ.), ಪ್ರೇರಕಂ (ಗ.ಘ.)

ಗಳಗಳನೆ ನಡೆತಂದು, [1]ಕಂಬಳಿ[1]ಯ ನಾಗಿದೇವನನಂದಣದಲುಂ ಬಿಜಯಂಗೆಯ್ಸಿ ತಾಂ ಕೆಲದೊಳು ಬರುತ್ತಂ—ದೇವ, ಭಕ್ತದೇಹಿಕದೇವ, ನೀಂ ಪೊಕ್ಕಲ್ಲಿ ಪೊಕ್ಕವರೊಕ್ಕುದಂ ಕೊಂಡೆ. ನೀನಿರ್ದ ಕುಲವೆ ಸತ್ಕುಲಂ. ನಿನ್ನಿಂದ ನಾಂ ಕುಲಜನೆ. ಕೂಡಲಸಂಗ ಕರುಣಿಸು—ಎಂದು ಗೀತಮಂ ಪಾಡುತಂ ನಡೆತಂದು, ಬಿಜ್ಜಳನುಂ ಪರವಾದಿಗಳುಂ ಕೌತುಕಂಬಡುತ್ತಿರಲು, ದಂಡಿಗೆಯಿಂದುಪಮುಸ್ಸ್ಯದೇವರನಿಳುಪುವಂತಿಳುಪಿ ತಾನೆ ಕೈಗೊಟ್ಟು ಬಂದಾಸ್ಥಾನದ ನಡುವೆ ನಿಂದಿರ್ದು, ಕರೆ ಕರೆ ನಿನ್ನ ಕರ್ಮಜಡರನೆಂದು ಕರಸಿ, ಬಂದ ವಿಪ್ರನೊರ್ವನ ಮೆಯ್ಯಂ ಸೀಳೆ ಕೆನ್ನೆತ್ತರುಂ ಪುಳುವುಂ ಸುರಿಯಲರಸಂ ಕಂಡು ನೆಱೆ ಪೇಸಿ ತೆಗೆತೆಗೆಯೆಂದು ಕಣ್ಮುಚ್ಚಿಕೊಳುತ್ತಿರೆ; ಬಸವರಾಜನೆದ್ದು, ಇತ್ತ ನೋಡು ಬಿಜ್ಜಳನೃಪಾಲ ಎಂದು, ರಜತಾದ್ರಿಯರಸನಂ ಗೌರೀಪತಿಯುಂ ಗಂಗಾಧರನಂ ವಿಭೂತಿಭೂಷಣನಂ ಚಂದ್ರಧರನಂ ಪುಣ್ಯಮಯನಂ ಶಿವನಂ ನೆನೆದು ಸುಧಾಕರಧರನ ಪಾದದಂತಿರ್ದ ಶರಣನ ಪಾದಮಂ ಪಿಡಿದು, ಸುರಧೇನುವಿನ ಪಯೋಧರಮನಿಸುವಂತೆ ಉಂಗುಟದ ಮೊನೆಯನಿಸಲೊಡಂ, ಶ್ವೇತಪರ್ವತದ ಪಾದತಟದ ಸರಿವುದರಿವಿನ ಹಾಲೊಱತೆ ಸುರಿತಪ್ಪಂತೆ ಹಾಲ ಹಳ್ಳವೋಲಗದ ನಡುವೆ ಮಡುಗಟ್ಟಿ ಪರಿದು ಪೋಱಸೂಸೆ, ಕಂಡು+ ಬಿಜ್ಜಳಂ ಕೌತುಕಂಗೊಂಡು ಭಯರಸವೇಱ ಭಾವಿಸುತ್ತಿರೆ, ಪುರಜನಂ ಬೆಱಗಾಗೆ, ಶರಣರ್ ಗುಡಿಗಟ್ಟೆ, ಪರವಾದಿಗಳ್ ಮೆಲ್ಲಮೆಲ್ಲನೆ ಸರಿಯೆ;

ಸಾಮರ್ಥ್ಯದಾಯಕಂ ನಾಯಕರ ದೇವಂ ಬಸವರಾಜಂ ನಿಂದು—ಎಲೆ ಧರಿತ್ರೀನಾಥ, ಸೂರ್ಯನ ಮೈಯೊಳು ಕಳಂಕುಂಟೆ? ಅಮೃತರಸದೊಳು ಕೈ[2]ಪೆಯು[2]ಂಟೆ? ಶಿವಭಕ್ತರ ಮೈಯೊಳು ಸುಧಾರಸವಲ್ಲದೆ ಮತ್ತೊಂದುಂಟೆ? ಶರಣಕುಲದುನ್ನತಿಯನಱಯದೆ ನಿನ್ನ ವೇದಜಡರ ಮಾತು ಮೇರೆಗೆಡಿಸಿತ್ತು, ನಿರ್ದೈವರ ನುಡಿ ಬುದ್ಧಿಗೆಡಿಸಿತ್ತು, ಕರ್ಮಿಗಳ ಸಂಗಂ ಪೆರ್ಮೆಗೆಡಿಸಿತ್ತು, ಇದಂ ಕಂಡಾದಡಂ ಶರಣರಂ ನಂಬು. ಮರು

---

[1] ಸಂಬೋಳಿ (ಗ.), ಸಂಬೋಳಿಗೆ (ಘ.) + ಕಂಡು (ಕ.); [2] ಪು (ಕ.)

ಳಾಗದಿರು—ಎಂದು ಬಿಜ್ಜಳಂಗಭಯಮಂ ಕೊಟ್ಟು, ಭಕ್ತಿಯ ಬೆಂಬಳಿಯ
ಶರಣರ ಬೆಂಬಳಿಯಲ್ಲದೆ ಭವಿಗಳಂ ಮುಟ್ಟ[1]ನೆಂ[ಬ][1] [2]ಕಂಬಳಿ[2]ಯ ನಾಗಿ
ದೇವನಂ ಗಜಮಸ್ತಕದ ಮೇಲೆ ಬಿಜಯಂಗೆಯ್ಸಿ ಪುರದೊಳು ಮೆಱೆಯಿಸಿ
ತನ್ನ ಮಹಮನೆಗೆ ತಂದಾನೆಯಿಂದಿಳಿಪಿ ಗದ್ದುಗೆಯನಿತ್ತು ಮೈತೀವಲುಡ
ಕೊಟ್ಟು ಮನಂತೀವಲಾರಾಧಿಸುತ್ತವರಂ ಕಳುಪಿ ; ಸಂಗನಬಸವಂ ಬಸವಿ
ದೇವಂ ಹಾರದ ನಡುವಣ ನಾಯಕರತ್ನದಂತೆ, ಅವಯವದ ನಡುವಣ
ಉತ್ತಮಾಂಗದಂತೆ, ನವರತ್ನದ ನಡುವಣ ಚಿಂತಾರತ್ನದಂತೆ, ಗೋಕುಲ
ದೊಳಗಣ ಕಾಮಧೇನುವಿನಂತೆ, ತರುಕುಲದ ನಡುವಣ ಸುರಕುಜದಂತೆ,
ಗಿರಿಗಳ ನಡುವಣ ಮೇರುಗಿರಿಯಂತೆ, ಸುವರ್ಣದ ನಡುವಣ ಪರುಷದಂತೆ,
ನಕ್ಷತ್ರಂಗಳ ನಡುವಣ ಚಂದ್ರನಂತೆ, ನವಗ್ರಹಂಗಳ ನಡುವಣ ಭಾಸ್ಕರ,
ನಂತೆ, ಅನುಲೇಪನಂಗಳ ನಡುವಣ ಭಸಿತಮಂಡನದಂತೆ, ಕಾಂತಿಗಳ
ನಡುವಣ ಸ್ವಯಂಜ್ಯೋತಿಯಂತೆ, ಸಮಸ್ತಶರಣಮಧ್ಯಸ್ಥಿತ ಮನೋ
ಹರ ಮೂರ್ತಿಯಾಗಿ ನಿತ್ಯಸುಖದಿಂದಿರ್ಪಲ್ಲಿ—

ಸುರನದಿಯೊಳನರ್ಘ್ಯರತ್ನವುದಯಿಸುವಂತೆ ತನ್ನರಸಿ ಗಂಗಾದೇವಿ
ಯರ್ಗೆ ಗರ್ಭವುದಯಿಸಿ ಬಹಿರಂಗಭಾವರಸಂಮಿಕ್ಕು ಸೌಕುಮಾರ್ಯವೇಱು
ಮೆಲ್ಲಡಿಗಳು [3]ಮೆಲ್ಲನೆ ರಾಗಿಸೆ[3] ಕಿಳ್ಳೊಡೆ ತ್ರಿವಳಿಗಳಂ ಬೀಳ್ಕೊಡೆ, ತಿಳಿ
ಗರ್ಭಂ ತೆಳುವಸಿಱನೊತ್ತರಿಸೆ, ಪುಣ್ಯೋದರಂ ನಾಭಿಯಂ ಪೊಱಗಿಕ್ಕೆ, ತನು
ಚ್ಛಾಯೆ ಬೆಳ್ಪೇಱು ಬಾಸೆಯಂ ಬಣ್ಣವಿಡೆ, ಕಕ್ಷಪುಟಂ ಕರ್ಬೊಗರನು
ಗುಳೆ, ವಕ್ಷಃಶ್ರೀ ನೆಲೆಮೊಲೆಗೆ ತಿಲಕವಿಕ್ಕೆ, ಮುಖಂ ಲಾವಣ್ಯದ ಚಿಬ್ಬು
ವೊಯ್ಯೆ, ನುಡಿಗಳು ದಟ್ಟಡಿಯಿಡೆ, ಅಲರ್ಗಣ್ಣು ನಯುವೇಱೆ, ನೋಟಂ
ಬಳಲೆ, ಕಚಭರಂ ಕುಡಿಯಿಡೆ, ಸರ್ವಾಂಗಂ ಸಡಿಲೆ, ನವಮಾಸಂ ತೀವಿದ
ಪಕ್ಷಮುಖಸಮಯದೊಳು, ಬೇನೆ ಬೆರಸದೆ ನೋವು ನೆರೆಯದೆ ಗರ್ಭ
ವೆಂಬ ಕಾಸಾರದಿಂ ಬಾಲಹಂಸಂ ಪೊಱಮಡುವಂತೆ ಸುಮುಹೂರ್ತ
ದೊಳು ಸುಪುತ್ರನುದ್ಭವಿಸೆ ; ಜಾತಕರ್ಮವನಲಂಕರಿಸಿ ನಾಮಕರಣಮಂ

---

[1] ನೆಂಮ (ಕ.), ನೆಮ್ಮ (ಖ.) ; [2] ಸಂಬೋಳಿ (ಗ.ಘ.) ; [3] ರಾಘೆಯಿಂದೆ (ಕ.ಖ.ಘ.)

ಸಿದ್ಧರಸನೆಂದಿಟ್ಟು, ಲಿಂಗಮುಖದೊಳು ಕಣ್ದೆಱೆದ ಕಂದನಂ ಗಂಗಾ
ದೇವಿಯರ್ ಭಾವಿಸಿ ನೋಡಿ, ಪಾದೋದಕದಿಂ ಮಜ್ಜನಕ್ಕೆಱೆದು
ಪಂಚಾಕ್ಷರಿಯ ಬಾಯ್ವೆಣ್ಣೆಯನಿಕ್ಕಿ ಭಕ್ತಿರಸದ ಮೊಲೆವಾಲನೂಡಿ
ಮಂಗಳಾರತಿಯ ಕುಡಿಗಪ್ಪಿನ ಕಾಂತಿಯಿಂದಂಜನಮನೆಚ್ಚಿ ಭಸಿತದ
ತಿಲಕಮನಿಟ್ಟು ನೇಹದ ಕಾಪಿಟ್ಟು ಪ್ರಸಾದದ ತುಂತುಱಿಂ ತೂಪಿಟ್ಟು ೧೧೦
ಶರಣರ ಚರಣದ ತೊಟ್ಟಿಲೊಳು ಪಟ್ಟಿರಿಸಿ · ಪುರಾತನರ ಗೀತದಿಂ
ಜೋಗುಳಂಬಾಡಿ, ಭಕ್ತಿಯ ಮಱಿಯಂ ಸಲಹುವಂತೆ ನಿಷ್ಠೆಯ ಶಿಶುವಂ
ಸಾಗಿಪಂತೆ ಮೋಹದಿಂದೋವುತ್ತಿರಲು;

ಒಂದೆರಡುವರಿಸಂ ಸಳನಳಿಸಿ ಬೆಳೆವುತಿಪ್ಪ ಅರಳೆಲೆಯರಸಂ ಮಾಗಾ
ಯ್ಗಳಮಲ್ಲಳಿಗಾಱಿಂ ಹೊಂಗಡಗದಲಿಂಗವಂತಂ ಉಡೆವಣೆಯದಿಗಂಬರಂ
ಗೆಜ್ಜೆಗಳ ಸಜ್ಜನನೆನಿಪ ಸಿದ್ಧರಸಂ ಬಸವಣ್ಣನ ತೊಡೆಯ ಮೇಲಿರ್ದು
ಭೋಂಕನೆದ್ದು ಮಹಮನೆಯಂಗಣದೊಳಂ ತವೆ ಪರಿದು ಗೆಜ್ಜೆಯ
ದನಿಯನಾಲಿಸಿ ನಿಂದು ಕೆಲಬಲನಂ ನೋಡಿ ಕಾಣದೆ ಮತ್ತೆ ಪರಿದು
ಮತ್ತೆ ನಿಂದು, ಅಂಜಿದಂತೆ ಬೆದಱುತಂ ಜಾನಿಸುವಂತೆ ಸುಮ್ಮನಿರುತಂ
ಮೆಚ್ಚಿದಂತೆ ನಗುತ್ತಂ ಬೆಚ್ಚಿದಂತೆ ಪರಿತಂದು ತಾಯನಪ್ಪುತ್ತೆ ಮೊಲೆಗೆ ೧೨೦
ಲಲ್ಲೈಸಿ ನಿಱುವಿಡಿದು ಮೊಗಮಂ ನೋಡುವ ತೂಗಾಡುವ ಮಗನ
ಮುದ್ದುತನವಂ ಬಸವರಾಜಂ ಕಂಡು, ಮನಂ ತಣಿದು ಕುಳಿರ್ಕೋಡಿ
ಹಾರೈಸಿ ಹಿಗ್ಗಿ ಶರಣರ್ ಪರಕೆಗಳನೀಯೆ ಸುಖಮುಖದಿಂದಂ ಶಿವಭಕ್ತ
ಸಂಗ ಸಮರಸಚಿತ್ತ[ಂ] ಸಂಗಪ್ರಸಾದ ಹೃದಯಕಾಯ ಸಂತುಷ್ಟನಾಗಿ
ರುತ್ತಮಿರೆಯಿರೆ ||

## ಹನ್ನೊಂದನೆಯ ಸ್ಥಲ

ಬಸವನ ಭಕ್ತಿಯಂ ಬಸವರಾಜನ ದಾನವಿನೋದವೃತ್ತಿಯಂ
ಬಸವನ ನಿಷ್ಠೆಯಂ ಬಸವದೇವನ ಸನ್ನುತಪುಣ್ಯಕೀರ್ತಿಯಂ |
ಬಸವನ ಪೆರ್ಮೆಯಂ ಸಲಿದು ಕೇಳುತೆ ಕಿನ್ನರಬೊಮ್ಮತಂದೆಗಳ್
ಬಸವನಿರೀಕ್ಷಣಾರ್ಥದೊಲವಿಂ ಬರುತಿರ್ದರಸೂನಸಾತ್ತ್ವಿಕರ್ || ೧*

ಇಂತು ಬಸವಣ್ಣನಂ ನೋಡುವುದ್ಯೋಗದಿಂ
ಸಂತಸದಿ ಬರುತಿರ್ದರಂತಲ್ಲಿ ಬೇಗದಿಂ |
ಎಸೆವ ಕಿನ್ನರಬೊಮ್ಮತಂದೆಗಳು ಬರುತಮಿರೆ
ಅಸಮನಯನನ ಗಣಾವಳಿ ನೋಡಿ ಸಲಿವುತಿರೆ |
ಮುಂತೆ ವೃಷಭಧ್ವಜಂ ಗಗನದೊಳು ಕುಣಿವುತಿರೆ
[1][ಪಿ]ಂತೆ ಮಾ[1]ಹೇಶ್ವರರ ಕೇಳಿಕೆಗಳೊಪ್ಪುತಿರೆ |
ನಡೆತಂದು ಪುರವೀಥಿಯಂ ಪುಗುತ್ತಿರಲಿತ್ತ
ಕಡುನೇಹಿ ಬಸವಂಗೆ ಬಲದ ಕಣ್ ಕೆತ್ತುತ್ತ- |
ವಿಮ್ಮಡಿಸಿ ಪುಳಕಂಗಳೊಮ್ಮೆಗೊಮ್ಮೆಗೆ ನೆಗೆಯೆ
ನೂರ್ಮಡಿಸಿ ಮೈವೆಚ್ಚುತಾನಂದವಂದೊಗೆಯೆ |
ಪರಮ ಹರುಷಂದೋಱುತಿರೆ ಸಂತಸಂಬಡುತೆ
ಹರನ ಭಕ್ತರ್ ಬರ್ಪರಿಂದೆನ್ನ ಮನೆಗೆನುತೆ |
ಶಶಿಯ ಬರವಂ ಚಕೋರಂ ಬಯಸಿ ನಿಂದಂತೆ
ಎಸೆವ [2]ಕಾರಂ ಬಯಸಿನಿಂದ[2] ಚಾದಗೆಯಂತೆ |
ಮುಂದೆ ಮಿಗೆ ಮೆಱೆವ ನಂದಿಯ ಪತಾಕೆಯ ನಡುವೆ
ಸಂದಣಿಪ ಗಣನಾಯಕರ ಸಂಭ್ರಮದ ನಡುವೆ |
ಕಿನ್ನರಯ್ಯಂ ಬರುತ್ತಿರೆ ದೂರದಿಂ ಕಂಡು
ತನ್ನ ಮನದೊಳಗೆ ಗುಡಿಗಟ್ಟಿ ಹರುಷಂಗೊಂಡು |

---

[1] ಮು (ಕ.ಖ.) ಸಂತತಮ ; [2] ಮುಂಗಾರಂ ಬಯಸುವ (ಕ.ಖ.)

ಬಸವನಿದಿರ್ಗೊಂಡು ಭಯಭಕ್ತಿಯಿಂ ಮೈಯಿಕ್ಕಿ
ಒಸೆದು ಕಿನ್ನರತಂದೆಗಿದಿರಾಗಿ ಮೈಯಿಕ್ಕಿ |
ಇರ್ಬರೊಂದಾಗಿ ನಲಿನಲಿದು ತಕ್ಕೈಸುತಂ
ಸರ್ಬನ ಗಣಂಗಳೊಳು ಪರಮಸುಖವೊಂದುತಂ |
ಬಂದು ಬಸವಣ್ಣನರಮನೆಯನೊಲವಿಂ ಪೊಕ್ಕು
ತಂದುನ್ನತಾಸನದೊಳಿರಿಸುತೆ ಮನಂ ಮಿಕ್ಕು |
ಪಾದಂಗಳಂ ತೊಳೆದು ತೀರ್ಥಜಲಮಂ ತಳೆದು
ಆದರಂ ಮಿಗೆ ಕಿಂಕರಾಕಾರದೊಳು ನೆರೆದು |
ಪನ್ನೆರಡು ಸಾವಿರೊಡೆಯರ ನಡುವೆಯಾಡುತಂ
ಕಿನ್ನರಯ್ಯಂಗೆ ಲಿಂಗಾರ್ಚನೆಗೆ ನೀಡುತಂ |
ಸಂಗಂಗೆ ಸಂಗಡದೊಳಾರೈಸಲಿಕ್ಕುತಂ
ಹಿಂಗದೆ ಶಿವಪ್ರಸಾದಂಗಳಿಂ ಪೆಚ್ಚುತಂ |
ಕಿನ್ನರಯ್ಯಂಗೆ ಆದರದಿಂದೆ ಉಡಲಿತ್ತು
ಮನ್ನಿಸುತ್ತವರ ಪದಮಂ ನೆತ್ತಿಯೊಳು ಹೊತ್ತು |
ಕಿನ್ನರಯ್ಯನ ಹರುಷವೇ ಹರುಷವಾಗುತಂ
ಕಿನ್ನರಯ್ಯನ [1]ನೇಹ[1]ವೇ [1]ನೇಹ[1]ವಾಗುತಂ |
ನಲಿನಲಿದು ಕೆಲದೆವಸವೀ ತೆಱದೊಳೊಪ್ಪುತಿರೆ
ಒಲವು ದಳವೇಱಿ ಇರ್ಬರ ನಡುವೆ ಬೆಳೆವುತಿರೆ |
ಒಂದು ದೆವಸಂ ಕಿನ್ನರಯ್ಯಂಗಳೊಲುಮೆಯಿಂ
ಇಂದುಧರನಾರೋಗಣೆಗೆ ಚಿತ್ತದರ್ತಿಯಿಂ |
ತನ್ನ ಸೊಗಸೇ ಶಿವಂಗತಿಸೊಗಸು ತಾನೆಂದು
ಚೆನ್ನವಪ್ಪುಳ್ಳಿಗಳ ಮೇಲೋಗರಕ್ಕೆಂದು |
ತರಿಸಿ ಸುಖಮುಖದಿಂದ ಸೋದಿಸುತ್ತಿರ್ಪಲ್ಲಿ
ಶರಣರೊಡಗೂಡಿ ಮಿಗೆ ಬಣ್ಣಿಸುತ್ತಿರ್ಪಲ್ಲಿ |

---

1 ಸರಸ.

ಹೆಂಪಿಂದೆ ಶರಣರ ನಡುವೆ ಉಳ್ಳಿ ಮೆಱೆವುತಿರೆ
ಕಂಪು ಬಸವನ ನಾಸಿಕಕ್ಕೆ ತೀಡುತ್ತಮಿರೆ |
ತಂದರಾರೀಯಭೋಜ್ಯವನೆನುತ್ತುಳ್ಳಿಯಂ
ನಿಂದಿಸುತೆ ಪೋದನರಮನೆಗೆ ಅಭವಪ್ರಿಯಂ |
ಆ ನುಡಿಯನಾಲಿಸುತೆ ಕಿನ್ನರಯ್ಯಂಗಳಿರೆ
ಏನೆಂದ ಬಸವಣ್ಣನೆನುತೆ ಕಾಯ್ಪಿಡಿದಡರೆ |
ಕಂಗಳರೆಕೆಂಪಾಗೆ ಮೀಸೆಗಳು ಕೆತ್ತುತ್ತೆ
ಹಿಂಗದಿರ್ಪುದು ತನ್ನ ಮಂದಿರದೊಳಗೆ [1]ಮ[1]ತ್ತೆ |
ಹರಹರ ಇದೇನೆಂದು ಕಣ್ಣ ನೀ[2]ರಿ[2]ಕ್ಕುತಂ
ಪಿರಿದುಂ ನಿರೋಧದಿಂ ಶರಣಸತಿ ನೋವುತಂ |
ಬರಲಾಗದಿಲ್ಲಿಗಾಂ ಬಂದಲ್ಲಿ ಸೈರಿಪುದು
ಶರಣರಂ ದೂರದಿಂ ಕೇಳುತಾದರಿಸುವುದು |
ಅಮೃತಮಂ ಬಿಸುಟು [3]ಮಲ್ಲ[3]ಯ್ಯನಾರೋಗಿಸುವ
ಅಮೃತಮಯಶಾಕಮನಿದಂ ನೋಡಿ ನಿಂದಿಸುವ |
ನುಡಿಗೇಳ್ದು ನಿಲಲಾಗದೆಂದು ಘುಡುಘುಡಿಸುತಂ
ಕಡುಕೋಪದಿಂದೆ ಪೊಱಮಟ್ಟು ದಡದಡಿಸುತಂ |
ಗಾವುದಳವಿಯ ಬಟ್ಟೆಯೊಂದೂರ್ಗೆ ನಡೆತಂದು
ದೇವಾರ್ಚನೆಯ ನಿತ್ಯನೇಮಕ್ಕೆ ಮನದಂದು |
ಅತ್ತಲಾ ಕಿನ್ನರಯ್ಯಂ ಹೋಗಿಯಿರಲಿತ್ತ
ನಿತ್ಯನಿಯಮಕ್ಕೆಂದು ಶರಣರಂ ಕೂಡುತ್ತ |
ಅಂದು ಬಸವಂ ಬಂದು ಶರಣಪಾದೋದಕದಿ
ಮಿಂದು ಮಡಿವರ್ಗಮಂ ಪೊದೆದು ಮಿಗೆ ಸಂತಸದಿ |
ಕಿನ್ನರಯ್ಯನನಱಿಸಿ ಕಾಣದೆ ಭಯಂಗೊಂಡು
ಎನ್ನೊಡೆಯನೆಲ್ಲಿರ್ದನೆಂದು ನೇಹಂಗೊಂಡು |

---

[1] ನು (ಕ.); [2] ರು (ಖ.); [3] ಮೇಲ (ಖ.)

ಬೆಸಗೊಳಲು ಶರಣರೆಂದರು ಬಸವರಾಜಂಗೆ
ಶಶಿಧರನ ಸದ್ಭಕ್ತಿಯಾಚಾರ[1]ಧೀರ[1]ಂಗೆ |
ಎಲೆ ಬಸವ ಕಿನ್ನರಯ್ಯಂ ತಮ್ಮ ದೇವಂಗೆ
ಸಲೆ ಸೊಗಸಿನುಳ್ಳಿಯಂ ತರೆ ಮಲ್ಲಿನಾಥಂಗೆ |
ಕಂಡದಂ ನಿಂದಿಸಿದರೆಂದು ಘನಕೋಪದಿಂ
ಕೆಂಡವಂ ಮೆಟ್ಟಿದಂತಾಗಿ ಸಂತಾಪದಿಂ |
ಮುಳಿದು ಪೋದರ್ ಕಿನ್ನರಯ್ಯಂಗಳಂತದಕೆ
ಕಳಿದು ಹೋಗದ ಮುನ್ನ ಹೋಗಿ ಬೀಳ್ಪ[2][ದು ಇ][2]ದಕೆ |
ಗುಣವಂತನಭಿಮಾನಿ ಮುಳಿದು ಹೋದಂ ದೇವ
ತ್ರಿಣಯನವತಾರ ಶರಣಂ ಪೋದನೆಲೆ ದೇವ |
ಎಂಬುದಂ ಕೇಳ್ದಂಜಿ ಬಸವಣ್ಣ ಮರವಟ್ಟು
ಹಂಬಲಿಸಿ ಹಲುಬಿ ಘನತಾಪ ಮನಮಂ ನಟ್ಟು |
ನೊಂದು ಮನಗುಂದಿ ತನು ಕಂದಿ ಮಿಗೆ ಮಿಗೆ [3]ಕೋ[3]ಡಿ
ಬಂದ ಸುಕೃತಂ ತಿರಿಗಿ ಹೋಯ್ತೆಂದು ನೆಱೆ ಬಾಡಿ |
ಇನ್ನೆಂತು ಮಾಡುವಂ ಕಿನ್ನರಯ್ಯಂ ಮುಳಿದ-
ನಿನ್ನೆಂತುಟಪ್ಪುದೋ ಭಕ್ತರೇ ಬಲ್ಲರಿದ-|
ನೆಂದು ಗಣವೃಂದಕ್ಕೆ ಭಯದಿಂದ ಮೈಯಿಕ್ಕಿ
ಅಂದು ಬಸವಣ್ಣನುಬ್ಬುಡುಗುತಂ ಮೈಯಿಕ್ಕಿ |
ಅಱಿದೆನಱಿದೆಂ ನೋಡು ಸುಡಿಕೆಟ್ಟ ನಾಲಗೆಗೆ
ಮಱೆದೆನುಂಟುಂಟು ಅಪರಾಧವೀ ನಾಲಗೆಗೆ |
ಬಂದುದೀವುಳ್ಳಿಯಂ ನಿಂದಿಸಿದ [4]ದಂಡ[4]ಕ್ಕೆ
ಇಂದು ನಾನಪರಾಧಿಯೈ ಶರಣವೃಂದಕ್ಕೆ |
ದೇವ ಒಂದಂ ಬೆಸಸಿರೇ ಇದಕ್ಕೆಸುತಮಿರೆ

---

1 ರಾಜ (ಕ.ಖ.), ಬೀಜ (ಗ.) ; 2 ದನಿ (ಕ.), ದನ (ಖ.) ; 3 ನೋ (ಖ.ಕ.) ;
4 ಡಂತ (ಖ.)

ದೇವಶರಣರ್ ನುಡಿದರಾ ಒಸವ ನಲಿವುತಿರೆ |
ಬಸವ ಕೇಳಿಂದಾದ ಸಮೆದ ಬೋಸವನಿಂತೆ
ಬಸೆವಶರಣನ ಕೊಂಡು ಬಂದು ನಾವಿನ್ನಂತೆ |
ಉಳ್ಳಿಯಿಂ ಕಿನ್ನರಯ್ಯಂಗಾದ ಮುಳಿಸುವಂ
ಉಳ್ಳಿಯಿಂದವೆ ತೀರ್ಚೆ ಕಳೆವುದು ಸಿರೋಧವಂ |
ಎನೆ ಬಸವರಾಜಂ ಹಸಾದವೆನುತಂ ನಿಂದು
ಘನಮಹಿಮನಾಕ್ಷಣಂ ತರಿಸುತಿರ್ದಂ ನಲಿದು |
ಒಸೆದು ತರುತಿರ್ದರಾ ಲೇಸಪ್ಪ ಉಳ್ಳಿಯಂ
ಮಸಗಿ ತರುತಿರ್ದರಾ ಶಿವಭಕ್ತರೊಲ್ಮೆಯಿಂ |
ತೀವಿ ಬಂಡಿಯೊಳು ನಾಲ್ದೆಸೆಗಳಿಂ ಬರುತಮಿರೆ
ಏವೇಳ್ವೆನಾ ಭಕ್ತರುತ್ಸಹವನೊಪ್ಪುತಿರೆ |
ಕಹಳೆ ಮದ್ದಳೆ ಶಂಖನಾದವುಳ್ಳಿಯ ಮುಂದೆ
ಬಹುವಿಧದ ವಾದ್ಯಸಂತಾನವುಳ್ಳಿಯ ಮುಂದೆ |
ಹಾಡುವರ್ ಪರಸುವರ್ ಕುಣಿವರುಳ್ಳಿಯ ಮುಂದೆ
ಆಡುವರ್ ನೋಡುವರ್ ನಲಿವರುಳ್ಳಿಯ ಮುಂದೆ |
ಚಿತ್ರರಿಪ ವೃಷಭಧ್ವಜಂಗಳುಳ್ಳಿಯ ಮುಂದೆ
ಒತ್ತರಿಪ ಶರಣರ ಸಮೂಹವುಳ್ಳಿಯ ಮುಂದೆ |
ಇಂತು ಬರಲುಳ್ಳಿಯಂ ಬಸವಣ್ಣನಿದಿರ್ಗೊಂಡು
ಸಂತಸದೊಳಂದು ವಿಸ್ತರಿಸಿದಂ ಕೈಕೊಂಡು |
ಆನೆಗೆ ಗುಳಂ ಕುದುರೆವಕ್ಕರಿಕೆಯುಳ್ಳಿಯಿಂ
ನಾನಾಭರಣವೆಸೆವಲಂಕರಣವುಳ್ಳಿಯಿಂ |
ತೊಡುವುಡುವ ಪೊದೆವ ಸುತ್ತುವವೆಲ್ಲವುಳ್ಳಿಯಿಂ
ಪಿಡಿದಿಡುವ ಮುಡಿವ ಮಾಡುವವೆಲ್ಲವುಳ್ಳಿಯಿಂ |
ಇಂತು ಪಟ್ಟಣವೆಲ್ಲವುಳ್ಳಿಗಳ ಮಯವಾಗೆ
ಸಂತಸಂ ಮಾಡಿ ಬಸವಣ್ಣನುನ್ನತವಾಗೆ |

ಅವರಿದಿರ್ ಗಾವುದರೆದಾರಿಯೊಳಗಂದುಕ್ಕಿ
ತವಕದಿಂದೊಪ್ಪುವುಳ್ಳಿಯ ಚಪ್ಪರವನಿಕ್ಕಿ |
ಲಕ್ಕಲಕ್ಕಕ್ಕೆ ನೆರೆದಭವಭಕ್ತರ ನಡುವೆ
ಉಕ್ಕಂದದುರವಣೆಯ ವೀರಶರಣರ ನಡುವೆ |
ನೆರೆದು ನೆಗಹಿದ ಕೋಟಿವೃಷಭಧ್ವಜದ ನಡುವೆ
ಬರುತಿರ್ದನಾ ಬಸವನೆಸೆವ ಸಿಂಧದ ನಡುವೆ |
ಉಳ್ಳಿಗಳ ಜ[1]ಂಪ[1]ಂ ಶಿರೋಮಾಲೆಗಳನಿಕ್ಕಿ
ಉಳ್ಳಿಗಳ ಬಾಹುಬಳೆ ಕಂಠಮಾಲೆಯನಿಕ್ಕಿ |
ಉಳ್ಳಿಗಳ ಮುಡಿದು ಉಳ್ಳಿಗಳ ಕೈಯೊಳ್ ಪಿಡಿದು
ಒಳ್ಳಿತೆಸೆಸುವ ಮಸದ ಬಸವರಾಜಂ ನಡೆದು |
ಒರುತಮಿರೆ ಬೆಳ್ಗೊಡೆಗಳಲ್ಲಿ ದಿವಿ ಮುಸುಕಿದವು
ನೆರೆದು ಬಹುವಿಧವಾದ್ಯವಡಸಿ ನೆಱೆ ಮೊಳಗಿದವು |
ಧಿಮಿಧಿಮಿಕು ದುಮುಕುತತ್ತೊಂಗೆಂಬ ಮದ್ದಳೆಯ
ಚಮಕ ತಕನಕ ತಕನವೆಂಬ ಕಹಳೆಯ ದನಿಯ |
ನಟಟಿಹಕು ಫಣಫಣ ಚಿಟ್ಟಿಳಿಲೆಂಬ [2]ಆ[2]ವುಜೆಯ
ನಟವಿಕಟ ಕಟಕ ಬಿಱಿಱೆಂಬ ಕರಡೆಯ ದನಿಯ |
ನಡುವೆ ಕೇಳಿಸುವ ಕೇಳಿಕೆಯವರ ಸಂಗಡದ
ಗಡಣ ವಿಡಿದೊಪ್ಪದಿಂ ಬರುತಿರ್ದ ಜಂಗಮದ |
ಕೋಳಾಹಳದ ಸರ್ವಸಂಭ್ರಮಂ ನೆಗಳುತಿರೆ
ಮೇಳೈಪ ಪೌರಜನವರ್ತಿಯಿಂ ಬರುತಮಿರೆ |
ಎಡಬಲದ ವೀರತತಿ ನೆಲನನುಗ್ಘಡಿಸುತಿರೆ
ಬಿಡದೆ ಪರಸಮಯಿಗಳು ನಡನಡುಗಿ ಸರಿವುತಿರೆ |
ಭಕ್ತಜನಚರಣಸರಸಿರುಹಷಟ್ಪದನೆಂಬ
ಭಕ್ತಜನಕುಮುದವನಕಮನೀಯಶಶಿಯೆಂಬ |

---

[1] ಪ್ಪ (ಖ.); [2] ವಾ (ಕ.);

ಜಂಗಮದ [1]ವೇಳೆ[1] ಜಂಗಮದ ಕಿಂಕರನೆಂಬ
ಜಂಗಮಪ್ರಾಣ ಜಂಗಮದ ಸಂಪದನೆಂಬ |
ಬಿರುದೆತ್ತಿ ಕಹಳೆಗಳು ದೆಸೆದೆಸೆಗೆ ಕರೆವುತಿರೆ
ಧರೆ ನಡುಗೆ ನಿಸ್ಸಾಳನಾದವುಣ್ಮುತ್ತುಮಿರೆ |
ನಡೆದು ಬಂದುದು ರಜತಗಿರಿಯು ಹಾದಿಯ ತೆಱದಿ
ನಡೆತಂದುದಿಂದುಮೌಳಿಯು ನಿಬ್ಬಣದ ತೆಱದಿ |
ಇಂತು ಬರುತಿರೆ ಕಂಡು ಕಿನ್ನರಯ್ಯಂ ನಿಂದು
ಚಿಂತಿಸಿದನೆಲ್ಲಿಯದಿದೇನು ಕೌತುಕವೆಂದು |
ತನ್ನ ಮುನಿಸಂ ತಿಳುಪಲೆಂದು ಬಸವಂ ಬಪ್ಪ
ಉನ್ನತಿಯಿದೆಂದಱಿದು ತನ್ನ ಮನದೊಳಗಿಪ್ಪ |
ಮುನಿಸು ನೇಹದೊಳಿದಿರ್ಗೊಂಡುದಾ ಭಕ್ತಂಗೆ
ನೆನಹು ಬಸವನ ಮೇಲೆ ಬಿದ್ದುದಾ ಭಕ್ತಂಗೆ |
ಚಿತ್ತಂ ಬಸವನತ್ತ ತಿರಗಿತ್ತು ಭಕ್ತಸಂ
ಒತ್ತರಿಸಿ ಪುಳಕಂಗಳೆತ್ತಿದವು [2]ಶರಣ[2]ಸಂ |
ಇದಿರೆದ್ದು ಬಱಿಸಿದವು ಕರಣಂಗಳಾತನಂ
ಸದಮಳ ಶಿವಧ್ಯಾನಪರಿಪೂರ್ಣಹೃದಯನಂ|
ಇಂತು ಸಾತ್ತ್ವಿಕರಸದರಸನಾಗಿ ಬರುತಿರ್ಪ
ಕಂತುಮದಹರನ ಸುಖದವತಾರನೆನಿಸಿರ್ಪ |
ಕಿನ್ನರಯ್ಯನಸಕ್ಕಱಿಂದೆ ನೋಡುತೆ ಬಂದು
ಎನ್ನ ಸಂಗಮನೀತನೀತನೆನುತ್ತೈತಂದು |
ಇಳಿಪಿದಂ ಸರ್ವಾಂಗಮಂ ಕಿನ್ನರನ ಪದಕೆ
ಗಳಗಳನೆ ಸುರಿದನಾನಂದಜಳವಂ ತಳಕೆ |
ಎತ್ತಿದಂ ಕಿನ್ನರಯ್ಯಂ ಬಸವರಾಜನಂ
ಉತ್ತಮೋತ್ತಮಭಕ್ತಿಯಾಚಾರ[3]ತೇ[3]ಜನಂ |

---

[1] ಆಳು (ಗ.ಫ.) ; [2] ಭಕ್ತ (ಖ.) ; [3] ಬೀ (ಗ.ಫ.)

ತೆಗೆದು ತಕ್ಕೈಸುತಂ ತಣಿಯ[1]ದೋರೊರ್ವ[1]ರೊಳು
ಬಿಗಿಬಿಗಿದು ಪುಗಲೆಳಸುತಿರ್ದ[2]ರೋರೊರ್ವ[2]ರೊಳು |
ಆಲಿಕಲ್ಲಾಲಿಕಲ್ಲಂ ತಾಗಿದಂತಾಗೆ
ಹಾಲೊಳಗೆ ಹಾಲಂ ಕರಂ ಬೆರಸಿದಂತಾಗೆ |
ಬೆಳಗು ಥಳಥಳಿಪ ಬೆಳಗಂ ಕೂಡಿದಂತಾಗೆ
ತಿಳಿದಮೃತವಮೃತವಂ ಬಿಡದಪ್ಪಿದಂತಾಗೆ |
ಅಪ್ಪಿಕೊಂಡಿರ್ದರಿನಿತುಂ ಬೇಗವಿರ್ಬರುಂ
ಒಪ್ಪಂಬಡೆದರಭವನಾ[3]ಜ್ಞೆ[3]ಯೊಳಗಿರ್ಬರುಂ |
ಆಗ[4]ಳುಣ್ಮೆ[4]ದವು ದುಂದುಭಿಶಂಖಕಹಳೆಗಳು
ಚಾಗು ಬೊಲ್ಲೆಸುತೆ ನೆಗೆದವು ಭಕ್ತಹರಕೆಗಳು |
ಭೋರೆಂದು ಕೊಂಡಾಡಿದರ್ ಬಸವರಾಜನಂ
ಹಾರೈಸಿ ಕೊಂಡಾಡಿದರ್ ಕಿನ್ನರಯ್ಯನಂ |
ಒಡಗೊಂಡು ಬಸವರಾಜನ ಮಹಮನೆಗೆ ಬರುತೆ
ಗುಡಿಗಟ್ಟಿದುಳ್ಳಿಗಳ ಗುಡಿಯಂ ನಿರೀಕ್ಷಿಸುತೆ |
ಹಾಡುವ ಗಣಂಗಳಂ ಹರುಷದಿಂ ನೋಡುತಂ
ಆಡುವ ಗಣಂಗಳಂ ಗುರ್ಬಿನಿಂ ನೋಡುತಂ |
ಬಂದು ಬಸವಣ್ಣನರಮನೆಯ ನಲವಿಂ ಪೊಕ್ಕು
ಸಂದಣಿಪ ಕೋಟಿಗ[5]ಣ[5]ಸಂಚಯಕೆ ಕೈಮಿಕ್ಕು |
ಇರೆ ಸವೆದವಲ್ಲಿ ಉಳ್ಳಿಗಳ ಮೇಲೋಗರಂ
ಸರಸವೆನಿಪುಳ್ಳಿಗಳ ಪಕ್ವಾನ್ನ[6]ದಾ[6]ಗರಂ |
ಮಲ್ಲಿಗೆಯ ಬಣ್ಣಮಂ ಚಂದ್ರಿಕೆಯ ಸವಿಗಳಂ
ಅಲ್ಲಿಯಂಕುರಿಪ ತಾರಾಗಣದ ರುಚಿಗಳಂ |
ಕವರ್ದುಕೊಂಡಂತೆ ಸೆಜಿ ಥಳಥಳಿಸುವುಳ್ಳಿಯಂ

---

[1] ದೊಬ್ಬೊಬ್ಬ (ಕ.ಖ.) : [2] ದೊಬ್ಬೊಬ್ಬ (ಕ.) ; [3] ದಿ ; [4] ಳೂಳಿ (ಖ.) ;
[5] ಳ (ಖ.) ; [6] ದೋ (ಖ.ಗ.)

ಶಿವಭಕ್ತ ಕಿನ್ನರಯ್ಯನ ಸವಿಯ ಉಳ್ಳಿಯಂ |
ಸಕಳ ಪಕ್ವಾನ್ನದೋಗರತತಿಗಳಂ ಸವೆಯೆ
ಸಕಳ ಶರಣರ ಶಿವಾರ್ಚನೆ ಸೌಖ್ಯಮಂ ಪಡೆಯೆ |
ಆರೈಸಲಿಕ್ಕುತಂ ಸಕಳಶಿವಲಿಂಗಕ್ಕೆ
ಹಾರೈಸಿ ಪೊಡಮಡುತೆ ಪರಮಪ್ರಕಾಶಕ್ಕೆ |
ಕೈಕೊಂಡರಲ್ಲಲ್ಲಿ ಸತ್ಯಪ್ರಸಾದಮಂ
ಮೈ ಕೊಸರೆ ತಾಳಿದರ್ ಸುಕೃತಪ್ರಸಾದಮಂ |
ಉಳ್ಳಿಯಂ ಕಚ್ಚಿ ಪರಿದಾಡುತಿಪ್ಪರ್ ಕೆಲರು
ಉಳ್ಳಿಯಂ ಕಿನ್ನರಸುಮಂ ಪರಸುವರ್ ಪಲರು |
ಇಂತು ನಲವಿಂ ಪ್ರಸಾದಂಗಳಂ ಕೈಕೊಂಡು
ಸಂತತಂ ಪರಸಿದರು ಬಸವನಂ ನೆಲೆಗೊಂಡು |
ಅಮಮ ಶರಣರ ಬಂಧು ಶರಣರೊಲುಮೆಯ ಬಸವ
ಅಮಮ ಶರಣೈಕಚಿಂತಾಮಣಿಯೆ ಎಲೆ ಬಸವ |
ಅರರೆ ಶರಣರ ಮುಖದ ರತ್ನದರ್ಪಣ ಬಸವ
ಅರರೆ ಶರಣರ ಮನೆಯ ಪರುಷಪುರುಷನೆ ಬಸವ |
ಬಸವಯ್ಯ ಬಸವಣ್ಣ ದಂಡನಾಥನೆ ಬಸವ
ಬಸವ ಗಣವಿಸರದೊಳಗೆಸೆದ ಸಂಗನಬಸವ |
ಎಂದು ಕೀರ್ತಿಸುವ ಶರಣಸ್ತುತಿಗೆ ನಡನಡುಗಿ
ಒಂದುವಂ ಹೊಗಳದಿರಿ ಎಂದು ಚರಣದೊಳೆಱಗಿ |
ನುಡಿದನಾ ಬಸವಣ್ಣನರರೆ ಶರಣರ ಮುಂತೆ
ಬಿಡದೆ ಮಾಡುವೆನೆಂದು ಮಾಡಿದ ತೆಱದೊಳಿಂತೆ |
ಅತಿಶಯದೊಳೊಪ್ಪುವುಳ್ಳಿಯ ಪರ್ಬವಂ ಕರಂ
ಪ್ರತಿವತ್ಸರಂ ಮಾಡುತಿರ್ಪೆನಿಂತಿದು ಭರಂ |
ನೇಮವೆನಗೆಂದು ನೆಱೆ ಬಸವರಾಜಂ ನುಡಿದು
ಸೋಮಧರನೆನಿಪ ಕಿನ್ನರನ ಕರುಣಂಬಡೆದು |

ಕಿನ್ನರನ ಮುನಿಸನಾ ಪರ್ಬದಿಂದಂ ತಿಳಿಪಿ
ಮುನ್ನಿ ಸುತಲವರ ಪದದೊಳು ಚಿತ್ತಮಂ ನಿಲುಪಿ |
ಭಕ್ತಜನವನಧಿವರ್ಧನಸುಧಾಕರನೆನಿಪ
ಭಕ್ತಜನವನಜವಿಕಸಿತತರಣಿಯೆಂದೆನಿಪ |
ಪರಸಮಯತಿಮಿರಕಮನೀಯಭಾಸ್ಕರನೆನಿಪ
ಪರಸಮಯಸುಮನಕೋದಂಡಪುರಹರನೆನಿಪ |
ಮಝುರೆ ಶರಣರ ನಡುವೆ ಬಸವಣ್ಣನೊಪ್ಪಿದಂ
ಮಝು ಬಾಪು ಬಾಪು ಸಂಗನ ಬಸವನೊಪ್ಪಿದಂ ||

## ಹನ್ನೆರಡನೆಯ ಸ್ಥಲ

ಬಸವನ ಪುಣ್ಯಕೀರ್ತಿಲತೆ ಬೇರ್ವರಿಯಿತ್ತುರಗೇಂದ್ರಲೋಕದೊಳ್
ದೆಸೆಗಳನಗ್ಗಳಂ ಮುಸುಕಿ ಪರ್ವಿದುದಾಗಳೆ ಮರ್ತ್ಯಲೋಕದೊಳ್ |
ಕುಸುಮಿತವಾಗಿ ಸೌರಭದ ಹೊಂಪುಳಿಯೋಯ್ತ್ತಮರೇಂದ್ರಲೋಕದೊಳ್
[1]ಪಸರಿಸಿ[1] ಪೂರಿತಾಮಳಸುಧಾಫಳವಾದುದು ರುದ್ರಲೋಕದೊಳ್ || ೧*

ಇಂತು ಬಸವರಾಜಂ ಸಕಲ ಜಗದ್ಭರಿತವಾದಗಣ್ಯಾಪುಣ್ಯಮಯ ಕೀರ್ತಿಯಂ ತಳೆದು, ಸಂಗಮೇಶ್ವರ ಶ್ರೀಪಾದಪಂಕಜ ನಿರಂತರ ಸೇವನಾಜನಿತ ಸುಖರಸಭರಿತ ಶುದ್ಧಶೈವಸರೋನಿಧಿ ತರಂಗಮಾಲಾ ನಿಮಗ್ನಚಿತ್ತನಾಗಿರ್ದಂ ;

ಅತ್ತಲು ಕಳಿಂಗದೇಶದ ಮಹಾಭಕ್ತನಪ್ಪ ಮಹದೇವಸೆಟ್ಟಿಯ ರೊಂದುದಿಸಂ ಲಿಂಗಾರ್ಚನಾತತ್ಪರ[ಂ] ಅಮೃತಾನ್ನನಿವೇದಿತಪ್ರಸಾದ ಸ್ವೀಕೃತಕೃತ್ಯನಾಗಿ ಸುಖದೊಳಿಪ್ಪ ಸಮಯದೊಳು ; ಒರ್ವ ಮಾಹೇ ಶ್ವರಂ ಪುರಾತನ ವಿರಚಿತಗದ್ಯಪದ್ಯಂಗಳಂ ಕೇಳಿಸುತ್ತಂ, ಬಸವರಾಜನ ಗೀತದೊಳು—ಬೇಡಿಬೇಡಿದ ಶರಣಂಗೆ ನೀಡದಿರ್ದಡೆ ತಲೆ ದಂಡ ಕೂಡಲಸಂಗ, ಅವಧಾರು—ಎಂಬ ಗೀತಮಂ ಪಾಡೆ, ಮಹಾದೇವಿ ಸೆಟ್ಟಿಯರು ಕೇಳ್ದು ಕಂಪಿಸಿ ಕೌತುಕಂಗೊಂಡು ತಲೆಯಂ ತೂಗಿ— ಓಹಿಲಯ್ಯ ಉದ್ಭಟಯ್ಯ ಮಳೆಯರಾಜದೇವರ್ ಮೊದಲಾದರೀತೆಱದಿಂ ನುಡಿಯಲಮ್ಮರ್. ಇಂತು ನುಡಿವುದರಿದು. ಗೀತಾರ್ಥಮಂ ಪರೀಕ್ಷಿಪೆಂ. ಪತ್ತೆಂತ್ತಿನೊಳು ಮಾಣಿಕಂ ಪತ್ತೆಂತ್ತಿನೊಳು ಮುತ್ತು ಪತ್ತೆಂತ್ತಿನೊಳು ಹೊಸ ಹೊಂಗಳಂ ಬೇಡಿ ಬಸವನಂ ಮುಂದುಗೆಡಿಸುವೆಂ—ಎಂಬ ಮನದಿ ಸತ್ಯ ಶರಣರ ಸಂಕುಳಂ ಬೆರಸಿ ಪೊಱಮಟ್ಟು ಕೆಲವೆಡೆಗೆಯ್ದು ಪಲವೂರ್ಗಳಂ ಕಳಿದು ನಡೆತಂದು ಮಂಗಳವಾಡದ ಪೊಱವೊಳಲ ಶಿವಪುರದೊಳು ಬಿಟ್ಟಿ ರಲು ;

---

[1] ಪೊಸರಸ (ಗ. ಘ.)

ಇತ್ತಲು ಸಂಗಮೇಶ್ವರಂ ಬಸವನ ಚಿತ್ತಮಂ ಪರೀಕ್ಷಿಪೆನೆಂದು, ಕೆಂಜೆಡೆ ಕುಂಡಲಂ ಬೆಳಪ ಕಣ್ಣು ಪೊಳೆವ ಕಪೋಳಂ ಸುಲಿಪಲ್ಲ ಸುಧಾವದನಂ ಪುಲಿದೊವಲು ಭಸಿತಾಂಗಂ ಸಮುದಾಯಮಾಗಿ, ಗಳಗಳನೆ ನಡೆತಂದು ಜಂಗಮಧ್ಯಾನನಿದ್ರಾಮುದ್ರೆಯೊಳಿರ್ದ ಬಸವನಂ ಪೊಡೆದೆಬ್ಬಿಸಿ—ಏಳೇಳು ಬಸವ. ಮುಂದಱಿಯದೆ ಗೀತಮಂ ಪಾಡಿ ತೊಡಕಂ ತಂದುಕೊಂಡೆ. ಕಳಿಂಗದೇಶದ ಮಹದೇವಿಸೆಟ್ಟಿಯೆಂಬ ನಿಚ್ಚಳಭಕ್ತಂ ಕನಕರ[1]ತ್ನ[1]ರಾಶಿಗಳಂ ಮನವಾರೆ ಬೇಡಲೆಂದು ಬಂದಿರ್ದಪಂ. ಎಂತು ಮಾಡಿದಪೆ? ಇನ್ನೆಂತು ಕೊಟ್ಟಪೆ—ಎಂದು ಸಂಗಂ ಬೆಸಸಿದ ಮಾತಿಂಗೆ ಬಸವಂ ಮುಗುಳ್ನಗೆ ನಗುತ್ತೆ—ಅಂಜದಿರಂಜದಿರ್, ದೇವ. ಪರೀಕ್ಷೆಗೆ ತೆಱಹಿಲ್ಲಂ. ಕಟ್ಟಿದೆನೊರೆಯು, ಬಿಟ್ಟೆ ಬನ್ನಿಗೆಯು. ಓಡದಿರೋಡದಿರು. ಶರಣರ ಮನೆಯ ಬಿರುದಿನಂಕಕ್ಕೆ ಹಿಮ್ಮೆಟ್ಟದಿರೆಲೆ ದೇವ, ಎಲೆ ತಂದೆ, ಎಲೆಲೆ ಹಂದೆ, ಕೂಡಲಸಂಗ, [2]ಸ್ವ[2]ಯವಾಗು ಸ್ವಯವಾಗು—ಎಂಬ ಗೀತದ ಪರಿಚ್ಛೇದದುರವಣೆಗೆ ಸಂಗಂ ನಿಲಲಮ್ಮದೆ ಮಗನ ನಿಷ್ಠೆಗೆ ಮೆಚ್ಚಿ ಅಂತರ್ಧಾನಕ್ಕೆ ಸಂದು ಕೈಲಾಸಕ್ಕೆ ಬಂದು—ಬಸವಣ್ಣಂ ಕೊಟ್ಟಲ್ಲದೆ ಮಾಣಂ. ಕೊಡುವ ಸಮಯಕ್ಕನುವಾಗಿರವೇಳ್ಕುಂ—ಎಂದು, ಮೇರುವಿನೊಳಚ್ಛೊತ್ತಿ ಬೆಟ್ಟದ ಹೊಚ್ಚಹೊಸಹೊಂಗಳಂ ಪದ್ಮರಾಗಂಗಳಂ ಮೌಕ್ತಿಕವ್ರಜಮನನುಮಾಡಿಕೊಂಡು ಮಂಗಳವಾಡದ ಬಸವನ ಮಹಮನೆಯ ಮುಂದೆ ಪೋಗಿರೆಂದು ಕುಬೇರನಂ ಕಳುಪುತಿರ್ದಂ ;

ಇತ್ತಲು ಬಸವರಾಜಂ ದಂಡನಾಥಪಂಚಾನನಂ ಶಿವಶರ[3]ಣಂ[3] ನಿತ್ಯನೇಮಸಂಪನ್ನಂ ಪನ್ನಿಚ್ಛಾಸಿರ ಮಕುಟವರ್ಧನ ಮಾಹೇಶ್ವರರ ನಡುವೆ ನೀಚಾಸನನಾಗಿ ಭಯಭಕ್ತಿಯಿಂದಿಪ್ಪಲ್ಲಿ, ಶರಣಕುಲದ ಕರ್ಣಪರಂಪರೆಯಿಂ ಮಹದೇವಿಸೆಟ್ಟಿಯರು ಬಂದರೆಂಬ ಸಂಭ್ರಮಮಂ ಕಂಡಿದಿರೆದ್ದು ಪಾದದೊಳು ಬಿದ್ದು ತೆಗೆದಪ್ಪಿ ಬಿಗಿಯಪ್ಪಿ ನಡೆತಂದು ಸಿಂಹಾಸನದೊಳಿರಿಸಿ ಪಾದಪದ್ಮಪ್ರಕ್ಷಾಳನಂಮಾಡಿ ಪಾದೋದಕಭರಿತ

---

[1] ತ್ನದ (ಕ.) ; [2] ಸ್ಥ (ಖ.) ; [3] ಭ (ಖ.ಘ.)

ಸರ್ವಾಂಗನಾಗಿ ಸಕಲಗಣಂಗಳ್ವೆರಸಿ ಲಿಂಗಾರ್ಚನಂಗೆಯ್ದಾರೋಗಿಸಲಿತ್ತು ಸಪಂತಿಯೊಳ್ ಪ್ರಸಾದಮಂ ಕೈಕೊಂಬಲ್ಲಿ, ಮಹಾದೇವಿಸೆಟ್ಟಿಯರಿದೆ ಸಮಯವೆಂದು—ಎಲೆ ಬಸವ, ಬೇಡಿದ ಶರಣರ್ಗಿಲ್ಲೆನ್ನದೀವೆನೆಂಬ ಗೀತದೊಳಗಣ ಬಿಂಕದ ಬಿರುದಂ ಕೇಳ್ದು ನಿನ್ನೊಳೊಂದಂ ಬೇಡಿ ಬಂದೆಂ—ಎನುತ್ತಂ ಮತ್ತಂ ಬೇಡಲಮ್ಮದೆ ಗದುಗದಿಸಿ ಬೆಮರ್ತು, ಮೂವತ್ತೆತ್ತಿನೊಳು ತೊಗರಿ ಜೋಳದಕ್ಕಿ ಕಡಲೆಗಳನೊಡತೀವಿ ಕೊಡುವುದೆನುತ್ತಂದು ಶಿವಪ್ರೇರಣೆಯಿಂ ನುಡಿಯೆ; ಕೇಳ್ದು ಬಸವರಾಜಂ ಲಿಂಗಸದರ್ಥಂ ಜಂಗಮಸುರತರು ಸಾರಹೃದಯಂ ಧೀರೋದಾತ್ತಂ· ಸತ್ಯಸಂಧಂ ದಯಾನಿಧಿ ಶಿವಜ್ಞಾನಸಂಪನ್ನಂ ದರಹಸಿತವದನಸರಸಿರುಹನಾಗುತ್ತೆ—ಭಯಂ ಬೇಡ. ಬೇಡಿ ಬೇಡಿ. ಕಳಿಂಗದೇಶದಿಂ ಪೊಱಮಡುವಾಗಳೆನ್ನಂ ಬೇಡಲೆಂದುದ್ಯೋಗಿಸಿದ ಮಾರ್ಗದೊಳ್ ಬೇಡುವುದು. ಕುಡುವವಂ ಸಂಗಂ, ಬೇಡುವವಂ ಸಂಗಮದೇವಂ. ಎನಗೊಂದುಂ ಭಾರವಿಲ್ಲ. ಅಂಜಬೇಡಂಜಬೇಡ—ಎನೆ, ಮಹಾದೇವಿಸೆಟ್ಟಿಯರು ನಾಂಚಿ ತಲೆವಾಗಿರ್ದುದನಱಿದು, ಬಸವರಾಜಂ ದಂಡನಾಥಚೂಡಾಮಣಿ ಭಕ್ತಜನಬಾಂಧವಂ ಸಂಗನಂ ಮೂದಲಿಸಿ ಶಿವಜ್ಞಾನದ ಮೇಲೆ ಚಿತ್ತವನಿಟ್ಟು ಆಚಾರದ ಮೇಲಹಂಕಾರಮನಿಟ್ಟು ನಿಷ್ಠೆಯ ಮೇಲೆ ಬುದ್ಧಿಯನಿಟ್ಟು ಕಠಾರಿಯ ಮೇಲೆ ಕೈಯನಿ[1][ಡೆ][1], ಮುನ್ನ ಕರಿಕಾಲ ಚೋಳಂಗೆ ಕಱೆದಂತೆ ಪೊನ್ನ ಮಳೆಯನೊಂದನೇ ಕರೆದೊಡೆ ಪುನರುಕ್ತವೆಂದು ಬಸವಣ್ಣಂ ಕೈಕೊಳ್ಳನೆಂದು ಮೇರುವಿನೊಳಚ್ಚೊತ್ತಿದ ಪೊಸಪೊನ್ನ ಪಿಂಡಿಗೆಯೊಡನೆ ಮಾಣಿಕದ ಮಳೆ ಮುತ್ತಿನ ಮಳೆ ಮೊದಲಾದ ನವರತ್ನವೃಷ್ಟಿಯಂ [ಶಿವಂ] ಕಱೆದನೆಂಬಂತೆ, ರೋಹಣಾಚಲದ ಮಾಣಿಕಂಗಳುಂ ತಾಮ್ರಪರ್ಣಿಯ ಮುತ್ತುಗಳುಂ ನಂದಿಯುಂಡಿಗೆಯ ಮಿಸುನಿಯ ಪೊಂಗಳುಂ ಪುರದೊಳ್ ತೀವಿದ ಶರಣರ್ಗೆ ನಿರ್ಮಳ ಸ್ಥಾನಮಾದ ಬಸವನ ಮನೆಯ ಮುಂದೆ ಸುರಿದು ರಾಸಿಯಾಗಿರೆ, ಕಂಡು ಬಸವರಾಜಂ ಪುಳಕದ

---

1 ಟ್ಟು (ಕ.ಖ.) ಡಿ (ಗ. ಘ.)

ಹಿಂಡಸಿಂಡೆಗೊಳಿಸುತಂ ನಡೆತಂದೆತ್ತುಗಳಂ ತೀವಿ ಸಂತೋಷದಿಂ ಮಹದೇವಿಸೆಟ್ಟಿಯರ ಮನವಂ ತಣಿಪಿ ಕಳಿಂಗದೇಶಕ್ಕೆ ವರಂ ಬೀಳ್ಕೊಟ್ಟು, ಬಸವಂ ಬಸವರಾಜಂ ಬಸವಿದೇವಂ ಸುಕೃತಸೂಱೆಕಾಱಿಂ ಸುಖದೊಳಿಪ್ಪವಸರದೊಳು ;

ಸಂಗಮೇಶ್ವರಂ ಬಸವಿದೇವಸೊಡತಣ ಲೀಲಾವಿನೋದಕಲಹಮಂ ಕೈಕೊಂಡು—ಮನಮಂ ಮತ್ತೆ ಪರೀಕ್ಷಿಪೆಂ. ಮಹದೇವಿಸೆಟ್ಟಿಗೆ ಕನಕರತ್ನಂಗಳಂ ಕೊಡುವುದರಿದಲ್ಲ. ಕುಲವಧುವಂ ಕೊಡುವುದರಿದು—ಎಂದು, ವಿಚಿತ್ರಮಹಿಮಂ ಕೆಲಬರ್ ಗಣೇಶ್ವರರಂ ಕರೆದು—ನೀವೆಲ್ಲರುಂ ಮರ್ತ್ಯಲೋಕದೊಳು ಮಂಗಳವಾಡದ ಪಣ್ಯಾಂಗನೆಯರೊಳೊರ್ಬರುಳಿಯದಂತೆ ಎಲ್ಲರ್ಗಂ ಬೇಱೆಬೇಱೊತ್ತೆಗಳನಿತ್ತಲ್ಲಲ್ಲಿ ನೆರೆದಿಪ್ಪುದು—ಎಂದು ಬೆಸಸಿ ಕಳುಪಿ, ತಾನೊಂದು ವಿಟವೇಷಮಂ ತಳೆದನದೆಂತೆಂದಡೆ—

ಕುಸುಮಕುಲ[ದ] ಪರಿಮಳಾಮೋದಕ್ಕೆಡೆಗೊಟ್ಟು ಮೆಱೆವ ಸಿರಿಮುಡಿಯೊಳು ನೀಲದರಮನೆಯ (?), ಸುಕುಮಾರನೆನಿಪ ಬಾಲಶಶಿಯಂ ಕೇಳಿಸುವ ಗಾಯಕರಂತೆ ಸುತ್ತಿ ಮುತ್ತಿ ಝೇಂಕಾರಂಗೊಂಬ ತುಂಬಿಯ ಪಂತಿಯಂ ಮುಸುಂಕಿಟ್ಟು ಪವಡಿಸುವ ಬಸುಗಣ್ಣ, ತೊ[1][ಡಂಬೆ]ಯಂ ತಪ್ಪಳಿಸುವ ಪೆಣ್ದುಂಬಿಗಳಂತೆ ಲಲಾಟರಂಗದೊಳುಂಗುರಿಸಿ ಸಂಗಡದಿಂ ಕುಣಿವ ನೀಳಾಳಕಂಗಳ, ಅದಲ್ಲದೆಯುಂ ಪಡಿಯಂ ನೋಡಲ್ ಒಯಸಿ ನಡುವೆ ಪರಿಮಳದ ನಾವೆಯಂತಡ್ಡಮಿರ್ದ ನಾಸಿಕಮಂ ದಾಂಟಲಾಱದುಭಯಪಕ್ಷದಿಂ ಸುತ್ತಿಬಪ್ಪಾಸೆಯೊಳು ಬಟ್ಟೆಗೊಡುವುದೆಂದು ಕರ್ಣಾವತಂಸದಳಂಗಳ ಲಹಣಿಶ್ರೀಗೆ ಮೌಕ್ತಿಕಾವತಂಸಕಿರಣಚ್ಛಲದಿಂ ಚಾಮರಮನಿಕ್ಕುವಂತೆ ಗಂಡಮಂಡಲದೊಳು ಮಾರ್ಪೊಳೆವ ಕರ್ಣಪಾಲಿಕೆಗಳ, ಅದಲ್ಲದೆಯುಂ ನಸುಸುಧಾಕಿರಣಮಂ (?) ಪೋಲುವ[2][ಸಿ]ತಚ್ಛವಿಯಂ ಸೂಸುವಂತೆಸೆವ ತುಪ್ಪುಳುವಿಾಸೆಗಳ, ಮತ್ತಂ ಬಿಂಬಫಲಮಕಾಲಪಕ್ವಮೆಂದು ಮಾಣಿಕದ ಬಣ್ಣದ ನವ

---

[1] ಡೆ (ಕ.ಖ.ಗ.ಘ.) ; [2] ಗೀ (ಕ.ಖ.ಗ,ಘ,)

ಮಧುರಮಂ ಕಠಿನಾಶ್ರಯಮೆಂದು ಮೂಡ ದ್ವೀಪಾಂತರದೊಳೆಸೆವ ಪ್ರವಾಳಮಂ ಜಡಾಶ್ರಯವೆಂದೊಲ್ಲದವನಧಃಕರಿಸಿ ಮುಕ್ತಿಯ ಬಿತ್ತನೋಯಾರಿಸಿದಂತಿರ್ದ ದಂತಪಂಕ್ತಿಯನೊಳಗುಮಾಡಿಕೊಂಡು ಗರ್ವದಿಂ ರಾಗಿಸುವಂತೆಳಬೆಳುದಿಂಗಳೊಳ್ ಚಂದ್ರಮಂಡಲದೊಳೋಲೈಸಿಕೊಳುತಿಪ್ಪ ಮಧುರಾಧರಪಲ್ಲವ[1][ದ], ಅದಲ್ಲದೆಯುಂ ಸತ್ಯಾಮೃತಸಾಮರ್ಥ್ಯ ಕೃಪಾರತ್ನಭರಿತಮಾದ ಪುಣ್ಯದ ಕರಂಡಗೆಯಂತಿರ್ದ ಬಾಯ್ದೆರೆಯಿಂ ಮೆಱೆವ ಮುಖಮಂಡಲದ, ಅದಲ್ಲದೆಯುಂ ಸುಕುಮಾರಸೌಂದರ್ಯ ವಿರಚಿತ ಸುಕುಮಾರತೆಗಳಿದ್ದೆಸೆಯನೊತ್ತುಗೊಂಡು [2]ವೃತ್ತ[2]ವಾಗಿ ಗಳಗಳನಿಳಿದು ಸಳನಳಿಸಿ ಬೆಳೆದಂತೆಸೆವ ನಳಿತೋಳ್ಗಳ, ಮತ್ತಂ ಕಲ್ಪಕುಜದ ಶಾಖಾಕಾರದಂತೆ ಮೆಱೆವ ಧವಳದುಕೂಲದ, ಮತ್ತಂ ಎರಡಱಿಯದೆಱಗುವ ಲೋಕಪಾಲಕರ ಮಕುಟದ ಮಾಣಿಕದ ಬೆಳಗನುಂಡು ಬೆಳೆದಂತಲಕ್ತಕದ ಹಂಗಿಲ್ಲದೆ ನಿಜರಾಗದಿಂ ರಂಜನೆವಡೆದು ಸುಣ್ಬೆಳಗನುಗುಳ್ವ ಪದತಳದ, ಸೌಂದರಿಯದಿಂ ದೇಸೆವಡೆದ ಹದಿನಾಱು ಹರೆಯದ ಹರಂ ಕರುಣಿಸಿ ನಡೆತಂದು ;

ಬಸವರಾಜನ ಮಹಮನೆಯ ಶಿವರಾತ್ರಿಯ ಸಂಭ್ರಮಕ್ಕೆ ಸಂತಸಂಬಡುತ್ತಂ ಬಂದು ನಿಂದಿರ್ದ ಶಿವನಂ, ಷೋಡಶಹರೆಯದ ಕಮನೀಯನಂ, ಜಂಗಮವೆಂಬುದನಱಿದು ಬಸವಂ ಪುಳಕದೊಡನೆ ಭೋಂಕನೆದ್ದು ಕದವಂ ತೆಗೆದು ಪದತಳದೊಳು ಬಿದ್ದು ಕೊಂಡೊಯ್ದು ಸುಖಿಜಂಗಮವೆಂಬುದಂ ಮನದೊಳಱಿದು, ಕಣ್ಣೆವೆಯೊಳಿಕ್ಕಿ ಪಾದಮಂ ತೊಳೆದು ಕಮ್ಮೆಣ್ಣೆಯಂ ತಂದು ಮಜ್ಜನಂ ಮಾಡಿಸಿ ಅಮೃತಪ್ರಸಾದಮನಾರೋಗಣೆಗಿತ್ತು ಚಂದನದ್ರವ್ಯಾದ್ಯನುಲೇಪನಂಗಳಂ ಮಾಡಿ ಸುವರ್ಣಾಭರಣಂಗಳಿಂದಲಂಕರಿಸಿ ಪಚ್ಚಕರ್ಪುರದ ವೀಳೆಯಮನಿತ್ತು ಭಯಭಕ್ತಿಯಿಂ ಬೆಸಕಯ್ದು ನಿಯತನಾಗಿ, ಕಣ್ತೀವಿ ನೋಡಿ ನಾಲಗೆತೀವಿ ಹಾಡಿ ಕಮಳಕುಟ್ಮಳದೊಳು ಬಾಳಹಂಸನನಿರಿಸುವಂತೆ ಸೆಜ್ಜೆಯ ಮನೆಯ

1 ದಿಂ (ಕ.ಖ.ಗ.ಘ.) ;   2 ತ್ತಮಾಕಾರ (ಖ.) ;

ಮೃದುತರವಪ್ಪ ತಳ್ಪದ ಮೇಲೆ ಬಿಜಯಂಗೆಯ್ಸಿ ಬಸವರಾಜಂ [1]ಸನ್ನಿಧಿಯೊಳು ನೀಚಾಸನದಿಂ[1] ಪಾದಮಂ ಪಿಡಿದೊತ್ತುತ್ತಮಿರೆ;

ಬಸವ ಬಸವಾ, ನಾವು ಹೆಂಗೂಸಿಲ್ಲದೆ ಇರ್ದುದಿಲ್ಲೆಂಬ ಮಾತಂ ಕೇಳ್ದು—ದೇವದೇವ ನಿಮ್ಮ ಚಿತ್ತವನಱಿಯದಂಜಿರ್ದೆಂ. ಇದೊಂದರಿದಲ್ಲ—ಎಂದು ಪರಿಚಾರಕರಂ ಪುರದೊಳಯಿಂಕೆ ಕಳುಪಲವರಿವರೆನ್ನದೆ ಪಟ್ಟಣದ ಪಣ್ಯಾಂಗನೆಯರೆಲ್ಲಂ ಕೂಡಿ ದಂಪತಿಗಳಾಗಿರೆ, ದೇವಾ ಎಲ್ಲಿಯುಂ ತೆಱಹಿಲ್ಲವೆಂದು ಬಿನ್ನೈಸೆ, ಕೌತುಕಂಬಟ್ಟು—ಅಱಿದೆನಱಿದೆಂ. ತನ್ನ ಮಾಯವೆನ್ನಂ ಕೊಳುವುದೆ? ಅದಕ್ಕೇನಱಿಯಲಕ್ಕುಮೆನುತ್ತೆ; ಸಿರಿ ಸರಸ್ವತಿಯರಂ ಕೀಳ್ಮಾಡುವ ತನ್ನರಸಿ ಮಾಯಿದೇವಿಯರಂ ತಂದು ಕೂಡುವೆಂ. ಬಳಿಕ್ಕ ನೋಡಿಕೊಂಬೆನೆಂದು ನೋಡಿ; ಮಾಯಿದೇವಿಯರನೊಲ್ಲೆವೆಂದರಾದಡೆ ಮೇಲೆ ಮಾಳ್ಪ ಕಜ್ಜಮಂ ಕಾಣವೇಳ್ಕುದು. ಒಲ್ಲೆನೆಂದ ವಸ್ತುವಂ ಸಂಗಂಗೆ ಕುಡಲಾಗದೆಂತು ಮಾಳ್ಪೆನೆನುತೆ; ಮುನ್ನ ತನ್ನರ್ತಿಗೆ ಹೇರೂರ ಹೆಣ್ಣಂ ಗಂಡುರೂಪಂ ಮಾಡಿದೋಪಾದಿಯಿಂದೆನ್ನಂ ಹೆಣ್ಣಂ ಮಾಡದೆಂತು ಪೋದಪಂ? ಲಿಂಗ ಪತಿ ಶರಣ ಸತಿಯೆಂಬೀ ಮಾತಂ ದಿಟಂಮಾಡಿ ತೋರ್ಪೆಂ ಮಾಯಿದೇವಿಯರನೊಲ್ಲೆವೆಂದ ಬಳಿಕ್ಕ—ಎಂದು ಬಸವರಾಜಂ ಶರಣಜನಲೀಲಾಶೀಲಂ ಮನದೊಳುಜ್ಜುಗಂಗೆಯ್ವುತ್ತಿರಲು;

ಅತ್ತಲಾ ಮಾಯಿದೇವಿಯರು, ಊರೊಳಗೆ ಪಣ್ಯಾಂಗನೆಯರಿಲ್ಲದಿರ್ದಡೆನ್ನಂ ಜಂಗಮಕ್ಕೆ ಬಸವರಾಜಂ ಕೊಟ್ಟಲ್ಲದೆ ಮಾಣನೆಂದು ಸಿಂಗರಿಸಿಕೊಂಡು ಬಸವನ ಬರವಂ ಪಾರ್ದಿಪ್ಪ ಸಮಯದೊಳು; ಬಸವಂ ಬರಲಿದಿರ್ವಂದು, ನಡೆ ಬಸವ ನಿನ್ನ ಮನೋರಥಮಂ ಮಾಡಿದಪೆನೆಂಬ ಸತಿಯಂ ನೋಡಿ ಸಂತೋಷದಿಂ ಶಿವನ ಸುಖವನೊಡಗೊಂಡು ಬಪ್ಪಂತೆ ತಂದು, ಸೆಜ್ಜೆಯ ಮನೆಯಂ ಪೊಗಿಸಿ ಮುಚ್ಚುಳನಿಕ್ಕಿಕೊಂಡು ಬಸವಂ ಪೊಱವಾಗಿಲೊಳಿರೆ; ಮಾಯಿದೇವಿಯರು ದೇವನ ತೊಡೆಯಂ

[1] ನಿವಾಸದೊಳು (ಖ.), ನಿರಾಸನದಿಂ (ಘ.), (ಗ,ಘ.)

ಹೊಯ್ದೆಬ್ಬಿಸಿ ದೇವನ ಪುಸಿಮುಸುಕನೊಯ್ಯನೋಸರಿಸೆ, ಮಾಯೆಯ ಜವನಿಕೆಯುಂ ತೆಗೆದಂತೆ ದೇವನ ಚೋಹವಳಿದು ದಶಭುಜಂ ಪಂಚವದನ ತ್ರಿಣೇತ್ರನಾಗಿರೆ ಮಾಯಿದೇವಿಯರು ನೋಡಲಮ್ಮದೆ ನಡನಡಂನಡುಗಿ,
೧೪೦/ ಬಸವ ಬಸವಾ ಜಂಗಮದೇವರು ಸಂಗಮದೇವರಾದರೆನೆ; ತಾಯೆ ತಾಯೆ ಮುನ್ನವಾರೆಂದು ಕೊಟ್ಟೆನೆಂದು ನುಡಿವಲ್ಲಿಂ ಮುನ್ನವೆ ಸಂಗಮೇಶ್ವರಂ ಬಸವನ ಚಿತ್ತಮಂ ಪರೀಕ್ಷಿಸಲಾಱದೆ ನೋಲ್ತು ಬೇಗದಿಂದಂತರ್ಧಾನಕ್ಕೆ ಸಂದುದಂ ಮಾಯಿದೇವಿಯರು ಕಂಡು ಕದವಂ ತೆಗೆದು ಬಸವರಾಜಂಗೆ ಪೇಳೆ; ಕೇಳ್ದು ಅನುತಾಪದೊಳೊಂದಿ ದೇವಸಂ ಮೂದಲಿಸಿ—ಎಲೆಲೆ, ಕಾಡಿ ಕಾಡಲಮ್ಮದ ತಂದೆ, ನೀಂ ಕೇಳು. ಬೇಡಿ ಬೇಡಲಮ್ಮದ ಹಂದೆ, ನೀ ಕೇಳು. ಕೂಡಿ ಕೂಡಲಮ್ಮದ ಜಾ[1]ತಿಯೇ[1], ನೀಂ ಕೇಳು—ಎಂದು ಗೀತಮುಂ ಪಾಡಿ ನಿರೋಧದೊಳಿರಲು; ಇತ್ತಲು ಪೂರ್ವದಿಶಾಮುಖದೊಳರುಣೋದಯವಾಗುತ್ತಮಿರೆಯಿರೆ || †

---

[1] ತನೇ (ಘ.), ಲಿ (ಗ.) ; † ಇಲ್ಲಿಗೆ ಕ. ಪ್ರತಿ ನಿಂತುಹೋಗಿದೆ.

# ಹದಿಮೂಱನೆಯ ಸ್ಥಲ

ತವೆ ಬೆಳಗುತ್ತೆ ಶರ್ವಕರುಣೋದಯದಂತರುಣೋದಯಂ ಕರಂ
ಕವಿದೊಡೆ ನಿತ್ಯನೇಮರಚಿತಂ ಶರಣವ್ರಜಪಾದಪಂಕಜ-|
ಕ್ಕವನತನಾಗಿಯಂದು ಮೊದಲಾಗಿ ಗುಣಾನ್ವಿತೆ ಮಾಯಿದೇವಿಯಂ
ಶಿವನ ಲತಾಂಗಿಯೆಂದು ಪದೆದರ್ಚಿಸುತಿರ್ದನಮೂನನುರ್ವಿಯೊಳ್ || ೧*

ಇಂತರ್ಚಿಸುತ್ತುಮಿರೆ ನಡೆತಂದನಲ್ಲಮಂ
ಕಂತುಹರನವತಾರನಱಿತಾತನಲ್ಲಮಂ |
ಬಂದು ಬಸವಂಗೆ ಶಿವಲಿಂಗದನುವಂ ತೋಱಿ
ನಿಂದಿರದೆ ಹೋದನಾ ಕದಳಿಗೆ ಮನಂ ಮಿಾಱಿ |
ಪೋಗೆ ಬಸವಂ ಸದಾ ಸನ್ನಿಹಿತನಾಗುತಿರೆ
ರಾಗದಿಂದಲ್ಲಮಯ್ಯಂಗೆ ಬೆಱಗಾಗುತಿರೆ |
ಅನುವನಲ್ಲಮದೇವ[1]ನ[1]ಱಿಪಿದಂ ತಾನಂದು
ಮನವಾರೆ ಗೀತಮಂ ಪಾಡುತ್ತುಮಿರಲಂದು |
ಅರಸಿ ಗಂಗಾದೇವಿ ನಿಳಯದೊಳು ಸುಳಿವುತಿರೆ
ವರ ಮುತ್ತಿನೋಲೆಗಳು ತೀವಿ ಹೊಳೆವುತ್ತುಮಿರೆ |
ಲೆಂಕರಸನೆಂಬ ಭಕ್ತಂ ಕಂಡು [2]ಸರಸರನೆ[2]
ಭೋಂಕನೋಲೆಯನಲ್ಲಿ ತೆಗೆವುತಿರೆ [2]ಸರಸರನೆ[2] |
ತೆಗೆದ ಸಂಭ್ರಮದೊಳಗೆ ಹಾಲೆ ಸೊಪ್ಪಾಗುತಿರೆ
ಬಗೆ [3][ಬೆ][3]ಚ್ಚಿ ಭಕ್ತರೆಲ್ಲರಿದರಿದೆನುತ್ತುಮಿರೆ |
ಬಸವನಱಿದೆಲೆಲೆ ಸಂಗನ ಕರಂ ನೊಂದುವೇ
ಬೆಸಸುವಲ್ಲಿಂ ಮುನ್ನವೇ ಕೊಡದೆ ನಿಲ್ವುದೇ |
ಎನೆ ಭಕ್ತರೆಲ್ಲರನ್ಯಾಯವನ್ಯಾಯವೆನೆ
ಘನಮಹಿಮನಲ್ಲಿ ನುಡಿದಂ ಬಸವನಪ್ಪುದೆನೆ |

---

[1] ಗ (ಗ.) ; [2] ಸ್ವೈರಿಸದೆ (ಗ.ಘ.) ; [3] ವೆ (ಗ.), ಮೆ (ಘ.)

ಕೊಡದಿಪ್ಪುದನ್ಯಾಯ ಕೊಳ್ವುದಿಂತನ್ನೆಯವೆ
ಒಡೆಯರೊಡವೆಯ ಸೆಳಸೆ ಕೊಡದಿಪ್ಪುದುಂ ನಯವೆ |
ಕನ್ನವಿಕ್ಕುವಡೆ ಕತ್ತಿಯ ಪಿಡಿದು ನಡೆದಪೆಂ
ಮುನ್ನಲ್ಲಿ ಬಂದಿವಿಡಿವಲ್ಲಿ ಒಳಪೊಕ್ಕಪೆಂ |
ಎನ್ನರ್ಗೆ ಕೊಟ್ಟ ಕಾಯಂ ಕೊಟ್ಟ ಹರಣವಿದು
ಎನ್ನ ಸತಿಯೆಂಬುದಿದು ತಾ[1][ನೆ]ಲ್ಲ ವಾಯವಿದು |
ಎಂದು ಬಸವಂ ಭಕ್ತಿಯಿಂ ನುಡಿವುತಿರಲಂದು
ಬಂದು ಸಂಗಂ ಜಂಗಮಾಕಾರದೊಳ್ ನಿಂದು |
ನಡೆ ಬಸವ ಕೈಲಾಸಗಿರಿಗೆ ಪುಷ್ಪಕದೊಳಗೆ
ಪೊಡವಿಯೊಳಗಿರವು ಸಾಲ್ವುದು ಬಾ ಮಗನೆ ನಿನಗೆ |
ಎನೆ ಕೇಳ್ದು ನಸುನಗುತೆ ನುಡಿದನಾ ಸಂಗಂಗೆ
ಮನಸಿಜಹರಂಗೆ ಗಿರಿಶಂಗೆ ಗಿರಿಜೇಶಂಗೆ |
ಸಂಗಯ್ಯ ಬಾಯೆಂದು ಕರೆವೆ ನೀನೆನ್ನುವಂ
ಪಿಂಗಲೀಯದು ಶರಣಗೋಷ್ಠಿ ಕೇಳೆನ್ನುವಂ |
ಶರಣರೊಕ್ಕುದಱ ಸವಿ ಕೈಲಾಸದೊಳಗುಂಟೆ
ಶರಣಸಂಗದ ಸುಖಂ ಕೈಲಾಸದೊಳಗುಂಟೆ |
ಇಲ್ಲಿಯ ಸುಖಂ ದೇವ ಅಲ್ಲಿಯುಳ್ಳಡೆ ಲೇಸು
ಅಲ್ಲೆನ್ನ ಈಗಳೇ ಕೊಂಡು ಹೋಹುದು ಲೇಸು |
ಎಂದು ಬಿನ್ನೈಸೆ ಬಸವಂ ಬಾರದುದನಱಿದು
.... .... .... |
.... .... ....
ಸಂದ[ಸ]ಮಳದಿ ಸಂಗಮೇಶಂ ನಿಜನಿವಾಸಕ್ಕೆ |
ಅತ್ಯಧಿಕ ಬಸವನಾನಂದದಿಂ ಪಾಡುತಂ
ಉತ್ತಮೋತ್ತಮ ಶರಣರೊಳ್ ಕೂಡಿಯಾಡುತಂ |
ಬಿಬ್ಬಬಾಚಯ್ಯಂಗಳೊಲಿದು ಬರೆ ಕಾಣುತಂ

---
1 ವೆ (ಖ.)

ಅಬ್ಬರಿಸಿ ಬೊಬ್ಬಿಟ್ಟು ಪರ್ಬಿ ಪುಟವೇಱುತಂ |
ಅವರ ಪ್ರಸಾದನಿಷ್ಠೆಗೆ ಮೆಚ್ಚಿ ಬೆಚ್ಚುತಂ
ಅವರನಾರಾಧಿಸುತ್ತಾದರಿಸಿ ಕಳುಪುತಂ
ಕಕ್ಕಯ್ಯನೆಸೆವ ಭಕ್ತಿಯನೊರೆದು ಸೋಡುತಂ
ತಕ್ಕುದಂ ಮಾಡದಿರ್ದಡೆ ಕೋಡಿ ಬಾಡುತಂ |
ಮೋಳಿಗೆಯ ಮಾರಯ್ಯಗಳ ಮನವ ನೋಡುತಂ
ತಾಳಲಱಿಯದ ಮಹಿಮೆಗೊಲಿದು ತಲೆದೂಗುತಂ |
ಮಡಿವಾಳ ಮಾಚಯ್ಯನುರವಣೆಯನಾನುತಂ
ಜಡಿದು ನುಡಿದೊ[1][ದೆಯೆ][1]ವೈವೆಚ್ಚಿ ಮುಯ್ಯಾನುತಂ |
ಕಾಲಲೊದೆವರ್ ಬಡಿವರೊಡೆಯರಾಗಿರ್ದವರು
ಬಾಲನಂ ತಿದ್ದುವರು ತಂದೆತಾಯಾದವರು |
ಶಿವಭಕ್ತಿಯೈದದೆಂದೆನ್ನ ಸುದ್ಧರಿಸುವರು
ಶಿವಭಕ್ತರೆನ್ನೊಡೆಯರೊಲಿದಂತೆ ಮಾಡುವರು |
ಎಂದು ಗೀತಂಗಳಂ ಹೊರೆಯೇಱಿ ಹಾಡುತಂ
ಸಂದಣಿಪ ಶರಣಕಾರುಣ್ಯಮಂ ತಾಳುತಂ |
.... .... ....*
ಇಂತು ಬಸವಂ ಮರ್ತ್ಯದೊಳಗೆ ಮಹಿಮೆಯ ಬೀಱಿ |
ಸಂತತಂ ಕೆಲಕಾಲ ಶಿವಸುಖದೊಳೋಲಾಡಿ |
ಶಿವದ್ರೋಹವಂಗೈದ ಬಿಜ್ಜಳನ ಕೊಲಿಸುತಂ |
ಭವಹರನ ಶರಣ ಸದ್ಗೋಷ್ಠಿಯಂ ಸಲಿಸುತಂ |
ಕಪ್ಪಡಿಯ ಸಂಗಮೇಶ್ವರನಲ್ಲಿಗೈತಂದು |
ನಿಷ್ಠೆಮಿಗೆ ತುತಿಗೈದು ಪೊಡಮಟ್ಟು ಕೈಮುಗಿದು |
ದೇವ ಎನ್ನಂ ಬಿಡದೆ ಪೊರೆದ ಕೂಡಲಸಂಗ |
ದೇವ ಎನ್ನೊಡೆಯ ಮತ್ತಾತ ಕೂಡಲಸಂಗ |
ಷಟ್ತ್ರಿಂಶ ತತ್ವಕ್ಕತೀತ ಕೂಡಲಸಂಗ |

[1] ಡೆ (ಕ.ಖ.ಗ.), ದೆವ (ಘ.); * ಇಲ್ಲಿಗೆ ಖ. ಪ್ರತಿ ನಿಂತುಹೋಗಿದೆ.

ನಿತ್ಯ ನಿರ್ಮಳ ನಿಷ್ಕಳಂಕ ಕೂಡಲಸಂಗ |
ದೇವ ಭವದೀಯಾಜ್ಞೆಯಂ ಕೊಂಡು ಶಂಕರಾ |
ದೇವ ಮರ್ತ್ಯದ ಲೀಲೆ ಪೂರೈಸೆ ಶಶಿಧರಾ |
ಸಾಕುಮಾಡೈ ತಂದೆ ಲೋಕದಾಟವನಿನ್ನು |
ಸಾಕಾರವಲ್ಲದ ನಿರಾಕಾರವೆಡೆಗೊಂ[1][ಡಿನ್ನು][1] |
ತೆಱವುಗೊಡು ತಂದೆ ಬಂದಿಹೆನು ಬಸವನು ನೊಂದೆ
ತೆಱವುಗೊಡು ಕರುಣಾಬ್ಧಿ ತೆಱವುಗೊಡು ಭಕ್ತ್ಯಾರ್ತಿ, |
ತೆಱವುಗೊಡು ತಂದೆ ಕೂಡಲಸಂಗ ಭಕ್ತಾಂಗ |
ಎನಲು ಸಂಗಮದೇವ ಬಸವನ ನಿರೀಕ್ಷಿಸುತ |
ತೆಱಹ ತನ್ನೊಳು ಕೊಟ್ಟು ಬಸವನಂ ಸೈತಿಟ್ಟು |
ನೋಡುತಿರೆ ಭಕ್ತರೆಲ್ಲರ ಮುಂದೆ ಬಸವಂಣ |
ಗಾಢದಿಂ ಶಿವಸೊಳಗೆ ಬೆರೆದು ತಾ ಬಯಲಾದ |
ಆದಿ ಮೂರುತಿ ಧರ್ಮರೂಪ ವೃಷಭಸಸಂದು |
ಮೋದಿನಿಯೊಳ್ಮೆಱಸಿ ಬಳಿಕಾತನಂ ಒಳಕೊಂಡು |
ಕೈಲಾಸದೊಳಗೆ ಶ್ರೀಶೈಲಜಗೆ ಪೇಳುತಂ |
ಉಲ್ಲಾಸದಿಂ ಶರಣ ಜನಕೆ ತಾಂ ಪೇಳುತಂ |
ವೃಷಭ ಮುಖನಾಗಿರ್ದು ಮೊದಲ ಅಭಯದ ತೆಱದಿ |
ಬಸವನಂ ವೃಷಭ ಮುಖನಾಗಿ ಸೈತಿರಿಸುತಂ |
ಹಂಪಿನಿಂ ಹೆಚ್ಚಿನಿಂ ಅಮೃತಮಯನೊಪ್ಪಿದಂ |
ಸಂತತಂ ಹಂಪೆಯ ವಿರೂಪಾಕ್ಷನೊಪ್ಪಿದಂ ||

ಕಂ || ಧರೆಯೊಳಗರಿದರಿದೆಂದನೆ |
ಪುರಹರ ಸದ್ಭಕ್ತಿಯಂ ಮೆಱೆಯಿಸಿ ಸಂದ |
ತ್ಯುರು ವೃಷಭಾಂಕನ ಮೋಹದ |
ತರಳಂ ಹರಿಪಂಗೆ ಭಕ್ತಿಯನಿರದೀಗೆ ಹಂಪೆಯ ವಿರೂಪಾಕ್ಷಂ (?) ||

---

1 ಡೆ (ಗ.)

# ಕೆಲವು ಕಠಿನ ಪದಗಳ ಅರ್ಥ

## ಅ

| | | |
|---|---|---|
| ಅಕ್ಕಱು | ೧-೮೮ | ಪ್ರೀತಿ |
| ಅಗ್ಗಳ | ೨-೨೪ | ಅಧಿಕ |
| ಅಗ್ಗಿಸು | ೯-೪ | ಅದುಮು |
| ಅಗ್ಘಣಿ | ೭-೫೦, ೯-೪೦ | ನೀರು, ತೀರ್ಥ |
| ಅಗ್ಘವಣಿ | ೨-೬೮, ೩-೯ | ನೀರು, ತೀರ್ಥ |
| ಅಂಕಕಾಱ | ೬-೨೨ | ಯೋಧ |
| ಅಡ್ಡಣಿಗೆ | ೩-೬೩ | ಮುಕ್ಕಾಲು ಮಣೆ |
| ಅಣಕ | ೬ ೨೬ | ಅಡಕ, ದಟ್ಟ |
| ಅಣಿಯರ | ೧-೮೨ | ಅತಿಶಯ |
| ಅಣ್ಣೆವಾಲ್ | ೭-೧೧೩ | ಶುದ್ಧವಾದ ಹಾಲು |
| ಅದ್ದು | ೩-೧೧೮ | ಮುಳುಗಿ (ಧಾ. ಆಳ್) |
| ,, | ೮-೧೧೬ | ಮುಳುಗಿಸು (ಧಾ. ಅದ್ದು) |
| ಅಪ್ಪು | ೧-೧೨೬ | ನೀರು |
| ,, | ೧-೧೪೬ | ಆಲಿಂಗಿಸು |
| ಅಮರ್ದು | ೧-೧೪೯ | ಅಮೃತ |
| ಅರವರಿಸು | ೧-೫೮ | ವಿಚಾರಮಾಡು (?) |
| ಅರಳು | ೩-೨೭ | ಹೂ |
| ಅರಳೆಲೆ | ೧-೧೪೭ | ಒಂದು ಒಡವೆ |
| ಅರ್ತಿ | ೧-೧೪೪ | ಪ್ರೀತಿ, ಅಪೇಕ್ಷೆ |
| ಅಲಂಪು | ೮-೬ | ಸೊಗಸು, ವಿಭವ |
| ಅವತಂಸ | ೨-೨೪ | ಆಭರಣ |
| ಅವಸಥ | ೧೦-೧* | ಮನೆ |
| ಅಳಕ | ೨-೨೨ | ಮುಂಗುರುಳು |
| ಅಳವಡಿಸು | ೩-೧೧, ೮-೧೮ | ಜೋಡಿಸು |
| ಅಳವಿ | ೯-೫೯ | ಅಳತೆ |
| ಅಳಸು | ೭-೯ | ಒಂದು ಬಗೆಯ ತಿಂಡಿ |
| ಅಳಿ | ೩-೧೯ | ದುಂಬಿ |

## ಆ

| | | |
|---|---|---|
| ಆಭಾರ್ಯ | ೬-೧* | ಆಭರಣ |
| ಆಯ | ೫-೭೫ | ಆದಾಯ |
| ಆಯತಿ | ೫-೭೬ | ವಿಸ್ತಾರ, ಗಾಂಭೀರ್ಯ |
| ಆರಯ್ | ೯-೧೬೮ | ವಿಚಾರಿಸು |
| ಆರು | ೯-೨೩ | ಗರ್ಜಿಸು |
| ಆರೈಸಲ್ | ೩-೭೫, ೭-೧೨೧ | ಊಟಮಾಡಲು |
| ಆರೈಸು | ೭-೧೨೬ | ಊಟಮಾಡು |
| ಆರೋಗಣೆ | ೪-೪೨, ೧೦-೧೨ | ಭೋಜನ, ನೈವೇದ್ಯ |
| ಆಲಿಡು | ೪-೩೯ | ಕೂಗಿಕೊಳ್ಳು |
| ಆವುಜ | ೭-೧೦೬ | ಒಂದು ವಾದ್ಯ |
| ಆಳ್ | ೪-೩೧ | ಮುಳುಗು |
| ಆಳಿ | ೫-೫೪ | ಸಮೂಹ |

## ಇ

| | | |
|---|---|---|
| ಇಟ್ಟಣಿಸು | ೫-೫೨, ೬-೨೭ | ಗುಂಪುಸೇರು, ಒಟ್ಟಾಗಿರು |
| ಇಡಿ | ೧-೯೬, ೬-೬೨ | ತುಂಬು, ವ್ಯಾಪ್ತವಾಗು |
| ಇಂಡೆ | ೧೨-೬೫ | ಒಟ್ಟಿಲು, ರಾಶಿ |
| ಇತ್ತರ | ೬-೧೮ | ಎರಡು ಸಾಲು |
| ಇಸು | ೧೦-೭೦ | ಒತ್ತು ? ಹಿಂಡು ? |

## ಉ

| | | |
|---|---|---|
| ಉಕ್ಕಂದ | ೯-೧೧೮ | ಉಬ್ಬು, ಆಧಿಕ್ಯ |
| ಉಗ್ಘಡಿಸು | ೬-೭, ೧೦-೭ | ಕೂಗಿ ಹೇಳು (ನೆಲನನುಗ್ಘಡಿಸು = ಪಾದಾವಧಾನವನ್ನು ಹೇಳು) |
| ಉಡೆವಣಿ | ೧-೧೫೫ | ನಡುವಿಗೆ ಕಟ್ಟುವ ಒಂದು ಆಭರಣ |
| ಉಂಡಿಗೆ | ೧೨-೬೨ | ಮುದ್ರೆ |
| ಉಣ್ಮು | ೩-೧೧೮ | ಉಂಟಾಗು, ಹುಟ್ಟು |
| ಉದ್ವರ್ತನ | ೮-೫ | ಲೇಪನ |
| ಉದ್ವೇಗ | ೫-೧೫೨ | ವ್ಯಥೆ |
| ಉಪ್ಪರಿಸು | ೬-೮೩ | ಮುಚ್ಚಳವನ್ನು ತೆರೆ |
| ಉಪ್ಪಾರತಿ | ೭-೧೩೨ | ದೃಷ್ಟಿಪರಿಹಾರಕ್ಕಾಗಿ ನಿವಾಳಿಸುವ ಆರತಿ |

| | | |
|---|---|---|
| ಉಬ್ಬರ | ೧-೬೯ | ಆಧಿಕ್ಯ |
| ಉರವಣಿಸು | ೧-೧೬ | ಸಡಗರಿಸು (?) |
| ಉಳ್ಳಿ | ೧೧-೧೦೯ | ನೀರುಳ್ಳಿ |

## ಎ

| | | |
|---|---|---|
| ಎಡ್ಡ | ೬-೫೮ | ರಮ್ಯ |
| ಎರಗಿವಿ | ೧೦-೪೩ | (ಎರವು + ಕಿವಿ) ಚಾಡಿಕೇಳುವ ಕಿವಿ |
| ಎರಡು | ೧-೪೯, ೮-೩೮ | ಭೇದ, ಮೋಸ |
| ಎರೆ | ೫-೬೪ | ಬೇಡು |
| ಎಸವು | ೭-೧* | ಶೋಭೆ (ಧಾ. ಎಸೆ) |
| ಎಳಸು | ೩-೪೩ | ಅಪೇಕ್ಷಿಸು |

## ಒ

| | | |
|---|---|---|
| ಒಕ್ಕುದು | ೧೦ | ಬಿಟ್ಟದ್ದು, ಪ್ರಸಾದ |
| ಒಗೆ | ೨-೧೦೩ | ಹುಟ್ಟು, ಉಂಟಾಗು |
| ಒಗ್ಗು | ೭-೬೯ | ಸೇರಿಕೊಳ್ಳು, ಅಂಟಿಕೊಳ್ಳು |
| ಒಟ್ಟತಂಗೊಳ್ | ೧-೯೦, ೩-೧೨೮ | ಒಟ್ಟಿಗೆ ಸ್ವೀಕರಿಸು |
| ಒಟ್ಟಲು | ೫-೧೨೪ | ಸಮೂಹ, ರಾಶಿ |
| ಒತ್ತರ | ೭-೧೮, ೨೬ | ದಟ್ಟ |
| ಒಪ್ಪ | ೧-೪, ೪-೪, ೫-೬೬ | ಠೀವಿ, ಸೌಂದರ್ಯ |
| ಒಸರ್ | ೩-೬೬ | ಸುರಿ |

## ಓ

| | | |
|---|---|---|
| ಓಗರ | ೨-೧೫ | ಅನ್ನ |
| ಓಜೆ | ೨-೬೮ | ಕ್ರಮ |
| ಓಯಾರಿಸು | ೧೨-೯೦ | ಸಾಲಾಗಿರಿಸು |
| ಓವರಿ | ೮-೫೧ | ಮುಚ್ಚುಮರೆ (ಸಂ. ಅಪವರಕ) |
| ಓವು | ೪-೮೪ | ಕಾಪಾಡು |

## ಕ

| | | |
|---|---|---|
| ಕಟಕಿ | ೬-೨೫ | ವ್ಯಂಗ್ಯ |
| ಕಡುಪು | ೯-೯೬ | ಶೀಘ್ರತೆ |

| | | |
|---|---|---|
| ಕಣೆಕಾಲ್ | ೧-೧೦೫ | ಮೊಣಕಾಲಿನಿಂದ ಕೆಳಗಿನ ಕಾಲು |
| ಕಂಠಣಿಸು | ೯-೧೦೪ | ಕುಗ್ಗು, ಸಂಕುಚಿತವಾಗು |
| ಕಪ್ಪಡ | ೮-೩೧ | ಬಟ್ಟೆ (ಸಂ. ಕರ್ಪಟ) |
| ಕಂಪು | ೧-೨೭, ೩-೨೩ | ಸುಗಂಧ |
| ಕಂಬಿ | ೩-೯, ೩-೧೧, ೩-೧೭ | ಅಡ್ಡೆ |
| ಕಮ್ಮಿತು | ೧೦-೩೮ | ಪರಿಮಳವುಳ್ಳದ್ದು |
| ಕರಡೆ | ೯-೧೩೦ | ಒಂದು ವಾದ್ಯ |
| ಕರಂಡಗೆ | ೩-೧೧ | ಪಾತ್ರೆ, ಬಿಂದಿಗೆ |
| ,, | ೧೨-೯೪ | ಭರಣಿ |
| ಕರಿಮುರಿವೋಗು | ೮-೭೮ | ಸೀದು ಮುರುಟಿಕೊಳ್ಳು |
| ಕಲ್ಲಿಯೋಗರ | ೯-೯೫ | ಬಲೆಯ ಚೀಲದಲ್ಲಿಟ್ಟಿರುವ ಬುತ್ತಿ |
| ಕವರ್ | ೧೧-೧೮೫ | ಗೋರಿಕೊಳ್ಳು |
| ಕಾಪಿಡು | ೭-೧೪೧ | ರಕ್ಷೆಯನ್ನು ಇಡು |
| ಕಾಯಕ | ೫-೧೫ | ವೃತ್ತಿ, ಉದ್ಯೋಗ |
| ಕಾಯ್ಪು | ೯-೪೮ | ಕೋಪ |
| ಕಾರಣಿಕ | ೧-೧೩೨, ೨-೧, ೫-೯೪ | ಯಾವುದೋ ಒಂದು ಉದ್ದೇಶಸಾಧನೆಗಾಗಿ ಭೂಮಿಯಲ್ಲಿ ಹುಟ್ಟಿದವನು, ಅವತಾರಪುರುಷ |
| ಕಾಹೇಱು | ೨-೫೭ | ಶಾಖವಾಗು |
| ಕಾಳ್ಗೆಡೆ | ೮-೧೦೨ | ತುಚ್ಛವಾಗಿ ಆಡು |
| ಕಿಂಕುರ್ವಾಣ | ೬-೪೪ | ಸೇವಕ |
| ಕಿಳ್ಪೊಡೆ | ೧-೧೦೯ | ಕಿಬ್ಬೊಟ್ಟೆ |
| ಕೀಲಾರ | ೯-೧೦೭ | ಸಂ. ಕ್ಷೀರಾಗಾರ |
| ಕುಕಿಲಿಱು | ೧-೩೭, ೯-೨೬ | ಕೂಗು, ಶಬ್ದಮಾಡು |
| ಕುಡಿತೆ | ೮-೨೨ | ಬೊಗಸೆ |
| ಕುತ್ತಱು | ೭-೯ | ಮೆದೆ, ಬಣಬೆ |
| ಕುಪ್ಪಸ | ೫-೫೯ | ಅಂಗಿ (ಸಂ. ಕೂರ್ಪಾಸ) |
| ಕುರುಳ್ | ೧-೧೪೭ | ಕೂದಲು |
| ಕುಱುಹು | ೬-೭೯ | ಗುರುತು |
| ಕುಳಿರ್ | ೧೦-೧೨೨ | ತಂಪು |
| ಕೂರ್ಪರ್ | ೪-೨ | ಪ್ರೀತಿಸುವವರು |
| ಕೆತ್ತು | ೯-೫, ೧೧-೪೯ | ಅದಿರು, ಅಲುಗು |
| ಕೆರ್ಪು | ೬-೧೦೩ | ಮೆಟ್ಟು, ಕೆರ |
| ಕೆಲೆ | ೩-೧೧೩, ೯-೨೫ | ಉತ್ಸಾಹದಿಂದ ಕೂಗು |

| | | |
|---|---|---|
| ಕೇಳಿಕೆ | ೬-೯೨, ೧೧-೬ | ಭಜನೆ (?) |
| ಕೈಘಟ್ಟ | ೩-೨೯, ೨-೧೪೮ | ಸುಗಂಧ ದ್ರವ್ಯದ ಅನುಲೇಪನ |
| ಕೈಪೆ | ೧೦-೨೮ | ಕಹಿ |
| ಕೈಯೊಡನೆ | ೯-೧೪೩ | ಕೂಡಲೆ |
| ಕೈವಾರಿಸು | ೬-೬೫ | ಹೊಗಳು (ಇಲ್ಲಿ, ಝೇಂಕರಿಸು (?) ) |
| ಕೊಣಕಿಡು | ೯-೭೬ | ನೆಗೆ, ಎಗರು |
| ಕೊನರ್ | ೧೧ ೧೯೭ | ಚಿಗುರು (ಮೈ ಕೊನರೆ = ರೋಮಾಂಚವಾಗಲು) |
| ಕೋಡು | ೨-೨೫ | ಕುಗ್ಗಿಹೋಗು |
| ,, | ೯-೭* | ದಾನ |
| ಕೋರೈಸು | ೪-೬೦ | ಕುಕ್ಕು |
| ಕೌಸಾಳ | ೨-೧೦೪ | ಕಂಚಿನ ತಾಳ (ಸಂ. ಕಾಂಸ್ಯ + ತಾಳ) |

## ಗ

| | | |
|---|---|---|
| ಗಾಡಿ | ೮-೭* | ಸೊಗಸು, ಸೌಂದರ್ಯ |
| ಗುಡಿ | ೯-೧೫೧ | ಮಂಟಪ |
| ಗುಡಿಗಟ್ಟು | ೧೦-೨೪ | ಸುತ್ತುಗಟ್ಟು |
| ಗುಣ್ಪು | ೧-೧೦೭ | ಆಳ |
| ಗುರ್ಬು | ೯-೧೨೮ | ಆಶ್ಚರ್ಯ, ಭಯ |
| ಗುಳ | ೯-೧೦೯ | ಆನೆಯ ಮೇಲೆ ಹಾಕುವ ಹೊದಿಕೆ |
| ಗೋಜಾಗತ | ೧೦-೪೧ | ಸಿಕ್ಕು, ತೊಡರು (?) |
| ಗೋವಳ | ೯-೧೦೯ | ಸಂ. ಗೋಪಾಲ |
| ಗೋವಳಿಗೋಲು | ೯-೯೨ | ದನಕಾಯುವವನ ಕೋಲು |

## ಚ

| | | |
|---|---|---|
| ಚಡಾಯ | ೬-೩೪ | ಸಂಬಳವನ್ನು ಹೆಚ್ಚಿಸುವುದು, ಬಡತಿ (?) |
| ಚರಿತ | ೩-೧೬ | ಶೀಲ |
| ಚಲಿ | ೯-೭೧೦ | ಛಲವುಳ್ಳವನು |
| ಚೆನ್ನಗುಳ್ಳೆ | ೯-೧೦೦ | (?) |
| ಚೋಹ | ೧೭-೧೩೮ | ವೇಷ |

## ಛ

| | | |
|---|---|---|
| ಛತ್ತೀಸ | ೮-೧೭೫ | ಮೂವತ್ತಾರು |

## ಜ

| | | |
|---|---|---|
| ಜನ್ನಿಗೆ | ೧೨-೨೮ | ಜನಿವಾರ (ಸಂ. ಯಾಜ್ಞಿಕ) |
| ಜಂಪು | ೧೧-೧೨೧ | ಗೊಂಚಲು, ಸಮೂಹ |
| ಜವನಿಕೆ | ೩-೬೭, ೩-೭೬ | ತೆರೆ |
| ಜವಿ | ೯-೯೮ | ಕುದುರೆಯ ಕೂದಲು |
| ಜಾಳಿಗೆ | ೮-೨೧ | ಹಣದ ಚೀಲ, ಥೈಲಿ |
| ಜಿಗಿಲ್ | ೯-೨೦೨ | ಅಂಟಿಕೊಳ್ಳು |
| ಜಿನುಗು | ೮-೧೦೩ | ಕೂಗು (?) |
| ಜೊಂಪು | ೧-೧೪೦ | ಮೈ ಮರೆಯುವುದು |

## ಝ

| | | |
|---|---|---|
| ಝುಂಕಿಸು | ೫-೬೬ | ಗದರಿಸು |

## ಡ

| | | |
|---|---|---|
| ಡಂಬರು | ೯-೫೯ | ಮೋಸಗಾರರು |

## ತ

| | | |
|---|---|---|
| ತಕ್ಕೈಸು | ೧-೫೪ } | ಅಪ್ಪಿಕೊಳ್ಳು |
| ತಕ್ಕೈರ್ಸು | ೩-೭ } | |
| ತಣಿ | ೩-೧೧೪ | ತೃಪ್ತಿಹೊಂದು |
| ತವರ್ | ೨-೫೪, ೪-೧೫ | ತಂದೆತಾಯಿಗಳು |
| ತಳುವು | ೧-೧೦೩, ೩-೪೩ | ತಡಮಾಡು |
| ತಳ್ಕಿಕ್ಕು | ೧-೧೦೩ | ಒಲಪುಹೊಂದು, ವಿಲಾಸಗೊಳ್ಳು |
| ತಾರಹಾರ | ೮-೮೩ | ಮುತ್ತಿನ ಹಾರ |
| ತಿಣ್ಣ | ೬-೮೫ | ಭಾರ, ದಟ್ಟ |
| ತಿಱಿ | ೧-೨೭ | ಹೂಬಿಡಿಸು |
| ತಿಂಥಿಣಿ | ೬-೨೬ | ಸಮೂಹ |
| ತೀಡು | ೩-೧೫ | ಸೋಕು, ಶಗುಲು |
| ತೀವು | ೧-೧೨೪, ೩-೩೩ | ತುಂಬು |
| ತುಱುಗಲ್ | ೪-೧೮ | ಸಮೂಹ |
| ತುಱುಗು | ೭-೪೦ | ತುಂಬು, ಅಡಕು |
| ತೂಪಿಡು | ೧೦-೧೧೦ } | ಉಃಪೆಂದು ಊದು |
| ತೂಪಿಱಿ | ೭-೧೪೧ } | |
| ತೆರೆಯರ್ | ೪-೧೦೨ | ತೆರೆ ಹಿಡಿಯತಕ್ಕವರು |

| | | |
|---|---|---|
| ತೇರೈಸು | ೪-೬೧ | ಹಿಮ್ಮೆಟ್ಟಿಸು, ಹಿಂದಿರುಗಿಸು |
| ತೊಡವು | ೧-೧೫೫ | ಆಭರಣ |
| ತೊಡಿಗೆ | ೯-೧೦೨ | |
| ತೊರೆ | ೩-೮೩, ೯-೧೧೬ | ದ್ರವತುಂಬಿಕೊಳ್ಳು |
| ತ್ರಿವಳಿ | ೧-೧೦೭ | ಹೊಟ್ಟೆಯ ಮೇಲಿನ ಮೂರು ಮಡಿಕೆಗಳು |

## ದ

| | | |
|---|---|---|
| ದಟ್ಟೈಸು | ೪-೭೪ | ಒಟ್ಟಾಗಿ ಸೇರು |
| ದಂಡಿಗೆ | ೧೦-೧೫, ೬-೪೨ | ಪಲ್ಲಕ್ಕಿ |
| ದಂಬು | ೧-೭೧ | ಸಂ. ದಂಭ, ಮೋಸ |
| ದರಿವು | ೧೦-೭೧ | ಗುಹೆ, ಕಮರಿಗೆ |
| ದಳವುಳಕಾಱ | ೮-೪ | ಹೆಚ್ಚಾಗಿ ಸೂರೆಮಾಡುವವನು |
| ದಳವೇಱು | ೩-೧೦೩, ೭-೯೦ | ಅಭಿವೃದ್ಧಿಯಾಗು |
| ದಾರವಟ್ಟ | ೧೦-೧* | ಹೆಬ್ಬಾಗಿಲು |
| ದಿಟ್ಟಿವಾರಿ | ೬-೨೦ | ತನಗೂ ದೇವರಿಗೂ ನಡುವೆ ಬಂದವರನ್ನು ಕತ್ತರಿಸುತ್ತೇನೆಂಬ ಪ್ರತಿಜ್ಞೆ |
| ದೃಷ್ಟಿವಾರಿ | ೪-೬೯ | |
| ದೇವಾಂಗ | ೮-೧೧ | ಶ್ರೇಷ್ಠವಾದ ಬಟ್ಟೆ |
| ದೊಣೆ | ೧-೧೦೫ | ಬತ್ತಳಿಕೆ |

## ಧ

| | | |
|---|---|---|
| ಧಾಳಿ | ೫-೧೪೭ | ಆಕ್ರಮಣ, ಮುತ್ತಿಗೆ |

## ನ

| | | |
|---|---|---|
| ನಂದವರ್ತ | ೭-೫೩ | ಒಂದು ಬಗೆಯ ಹೂ |
| ನಳಿತೋಳ್ | ೨-೩೦ | ಕೋಮಲವಾದ ತೋಳು |
| ನಿಚ್ಚಟ | ೭-೧೭೬ | ನಿಶ್ಚಲ |
| ನಿತ್ತರಿಸು | ೨-೧೬ | ಕಡೆಹಾಯಿ |
| ನಿಬ್ಬಣಿಗರು | ೪-೯೯ | ಬಳಗ, ವರನ ಕಡೆಯವರು |
| ನಿಮಿರ್ | ೧-೧೧೫ | ಉದ್ದವಾಗು |
| * ನಿರೋಧ | ೧-೫೪, ೪-೪೮ | ತಡೆ, ಅಡ್ಡಿ, ವ್ಯಥೆ |

* ನೀನಾರಿನ್ನು ಘೋಳಿಡೆ ಕಡುನಿರೋಧದ ಬನ್ನವೇನೆಂದೆನಲು—ಭವನ ಭಿಕ್ಷಾಟನ, ಸಂಧಿ ೩, ಪದ್ಯ ೩೬ ; ಹರಿಶ್ಚಂದ್ರ ಕಾವ್ಯ ಸಂಗ್ರಹ, ೨-೧೨ ; ೬-೯.

| | | |
|---|---|---|
| ನಿರ್ವೇಗ (ದ?) | ೪-೪೪, ೫-೧೫೪ | ಖೇದ |
| ನಿಲವು | ೫-೭೫ | ಉಳಿದದ್ದು, ಸಿಲುಕು |
| ನುಣ್ದನಿ | ೫-೫೮ | ಇಂಪಾದ ಧ್ವನಿ |
| ನೇವುರ | ೫-೫೮ | ಅಂದುಗೆ, ಕಾಲ್ಗಡಗ |
| ನೊಸಲ್ | ೧-೧೫೩, ೨-೨೧ | ಹಣೆ |

## ಪ

| | | |
|---|---|---|
| ಪಕ್ಕರಿಕೆ | ೧೧-೧೦೯ | ಕುದುರೆಯ ತಡಿ |
| ಪಟ್ಟಾವಳಿ | ೫-೧೭೧ | ರೇಷ್ಮೆಯ ಬಟ್ಟೆಗಳು |
| ಪಟ್ಟಿರು | ೪-೪೪ | ಮಲಗಿರು |
| ಪಡ್ಡಳಿ | ೩-೨೮, ೭-೪೨ | ಕಣಿಗಿಲೆ ಹೂ |
| ಪಡಿಯಱ | ೬-೯ | ಬಾಗಿಲು ಕಾಯುವವನು |
| ಪದುಳ | ೧೦-೫೩ | ಕ್ಷೇಮ |
| ಪದೆ | ೩-೭೮ | ಅದಿರು, ಸ್ಪಂದನಹೊಂದು |
| ಪನ್ನಿಛ್ಛಾಸಿರ | ೮-೧೪೪ | ಹನ್ನೆರಡು ಸಾವಿರ |
| ಪಯ | ೭-೬೨ | ಹಾಲು |
| ಪರಡಿ | ೭-೧೨೮ | ಸೇವಗೆ, ಗೌಲಿ |
| ಪರಿಣಾಮ | ೬-೪೯ | ಸುಖ, ಸಂತೋಷ (?) |
| ಪರಿಪಂಥಿ | ೬-೬೩ | ಶತ್ರು |
| ಪರಿಯಾಣ | ೩-೬೪, ೭-೯೯ | ಹರಿವಾಣ, ದೊಡ್ಡತಟ್ಟೆ |
| ಪರುಷ | ೪-೫೩ | ಸ್ಪರ್ಶಶಿಲೆ, ಸೋಕಿದ್ದನ್ನು ಚಿನ್ನಮಾಡುವ ಶಿಲೆ |
| ಪರೆ | ೮-೭೦ | ಚೆದರು |
| ಪಸಾಯ | ೬-೩೪ | ಬಹುಮಾನ |
| ಪಸಾಯ್ತ | ೬-೮ | ಪಡವಳ, ದುಸ್ತುಗಾರ |
| ಪಳವಿಸು | ೪-೩೮ | ಪ್ರಲಾಪಿಸು, ಅಳು |
| ಪಾರ್ | ೧೦-೪ | ನಿರೀಕ್ಷಿಸು |
| ಪಾವುಡ | ೫-೧೨೯ | ಕಾಣಿಕೆ (ಸಂ. ಪ್ರಾಭೃತ) |
| ಪಾಸಟಿ | ೮-೫೫ | ಸಮಾನ |
| ಪಿಂಗು | ೨-೪೯, ೩-೬ | ಬಿಡು, ಉಳಿ |
| ,, | ೪-೩೧ | ದೂರಕ್ಕೆ ಸರಿ |
| ಪಿಂಡಿಗೆ | ೯-೫೭, ೧೨-೬೦ | ರಾಶಿ, ಸಮೂಹ |
| ಪುಟವೇಳು | ೭-೮೭ | ನೆಗೆ |
| ಪುಟವೇಱು | ೧೦-೫ | ನೆಗೆ |

| | | |
|---|---|---|
| ಪುಯ್ಯಲ್ | ೯-೯೪ | ಕೂಗು |
| ಪುರುಡಿಸು | ೩-೧೪೮ | ಅಸೂಯೆ ಪಡು |
| ಪೇರುರ | ೨-೩೧ | ಅಗಲವಾದ ಎದೆ |
| ಪೊಡಮಡು | ೩-೫ | ನಮಸ್ಕಾರಮಾಡು |
| ಪೊಣ್ಮು | ೩-೭೮ | ಉಂಟಾಗು, ಉಬ್ಬು |
| ಪೊರೆ | ೩-೪೫ | ಸೇರು |
| ಪ್ರತ್ಯಕ್ಷ | ೪-೫೪ | ಅದ್ಭುತಕಾರ್ಯ, ಪವಾಡ |

## ಬ

| | | |
|---|---|---|
| ಬಟ್ಟದುಱುಂಬು | ೨-೧೮ | ದುಂಡಾದ ತುರುಬು |
| ಬಟ್ಟೆ | ೧೧-೫೯ | ದಾರಿ |
| ಬಲಗೊಳ್ | ೨-೩೪ | ಪ್ರದಕ್ಷಿಣೆ ಮಾಡು |
| ಬಲವರು | ೧-೯೧ | |
| ಬಳಿದೊತ್ತು | ೨-೬೪ | ವಂಶಪಾರಂಪರ್ಯವಾಗಿ ಬಂದ ತೊತ್ತು |
| ಬಳಿವಳಿ | ೯-೧೪೬ | ಹಿಂದೆ ಹಿಂದೆ |
| ಬಾಕುಳಿ | ೮-೨೫ | ಅತ್ಯಭಿಲಾಷೆಯುಳ್ಳವನು |
| ಬಾಯ್ದೆರೆ | ೧-೧೫೪ | ತುಟಿ |
| ಬಾರ ಸಂಕಲೆ | ೬-೨೨ | ಚರ್ಮದ ಸಂಕೋಲೆ |
| ಬಾವನ್ನ | ೭-೫೧ | ಶ್ರೀಗಂಧ |
| ಬಾಸಣಿಸು | ೩-೩೪ | ಮುಚ್ಚು, ಹೊದಿಸು |
| ಬಾಸೆ | ೧-೧೦೮ | ಹೊಕ್ಕುಳ ಮೇಲ್ಗಡೆಯ ರೋಮರಾಜಿ |
| ಬಾಹತ್ತರ | ೮-೧೨೫ | ಎಪ್ಪತ್ತೆರಡು |
| ಬಿಂಕ | ೧೨-೪೬ | ಗರ್ವ |
| ಬೀಗು | ೩-೧೦೭ | ಉಬ್ಬು |
| ಬೀಯ | ೫-೭೫ | ವ್ಯಯ |
| ಬೀರಣೆ | ೫-೫೯ | (?) |
| ಬೀಸುಂಬೂರಿಗೆ | ೭-೧೨೭ | ಒಂದು ಬಗೆಯ ತಿಂಡಿ |
| ಬೀಳ್ಕೊಳ್ | ೧-೯೨ | ಅಪ್ಪಣೆಯನ್ನು ತೆಗೆದುಕೊಂಡು ಹೊರಡು |
| ಬೆಗಡುಗೊಳ್ | ೪-೨೬ | ಗಾಬರಿಯಾಗು |
| ಬೆಬ್ಬಳಿಸು | ೯-೪೭ | |
| ಬೆಲ್ಲವತ್ತ | ೭-೩೩ | ಬಿಲ್ವಪತ್ರೆ |
| ಬೆಸ | ೧-೩೮ | ಆಜ್ಞೆ |
| ಬೆಳ್ಮಾಡು | ೮-೯೪ | ಮರುಳುಮಾಡು |

| | | |
|---|---|---|
| ಬೇಗ | ೬-೩೮ | ಕಾಲ |
| ಬೇಹು | ೧೦-೧೮ | ಗೂಢಚರ್ಯೆ |
| ಬೋನ | ೭-೫ | ಆಹಾರ |
| ಬೋಳೆಯ | ೪-೭೧ | ದೇವತೆ |
| ಬೋಳೈಸು | ೭-೧೨೪ | ಲಾಲಿಸು |

# ಭ

| | | |
|---|---|---|
| ಭವಿ | ೯-೬೭ | ವೀರಶೈವ ದೀಕ್ಷೆಯನ್ನು ಪಡೆಯದವನು |
| ಭಾಳ | ೨-೨೩ | ಹಣೆ |
| ಭಾರೈಸು | ೪-೬೦ | ಭಾರವಾಗು (?) |

# ಮ

| | | |
|---|---|---|
| ಮಂಜುಳಿಕೆ | ೮-೧೭ | ಪೆಟ್ಟಿಗೆ |
| ಮಟ್ಟವಿರಿಸು | ೬-೩೦ | ಕ್ರಮವಾಗಿ ಇರಿಸು |
| ಮಂದಿವಾಳ | ೮-೧೦೮ | ಅತಿಯಾದ ಸಲಿಗೆ, ಕುಚೋದ್ಯ |
| ಮಂದೈಸು | ೭-೫೪ | ದಟ್ಟವಾಗು |
| ಮರವಡು | ೪-೪೬ | ನಿಶ್ಚೇತನನಾಗು |
| ಮಲೆ | ೩-೧೧೪ | ಗರ್ವಿಸು |
| ಮಲ್ಲಣಿಗೊಳ್ | ೮-೬೦ | ವ್ಯಥೆಪಡು |
| ಮಲ್ಲಳಿಗಾಟಿ | ೧೦-೧೧೫ | ಸ್ವೇಚ್ಛೆಯಾಗಿ ಸಂಚರಿಸುವವನು |
| ಮಸಗು | ೩-೧೧೨ | ಹೆಚ್ಚಾಗು |
| ಮಹಮನೆ | ೬-೩೯, ೮-೧೪೫, ೧೧-೧೭೫ | ಅರಮನೆ, ಸೌಧ |
| ಮಾಗಾಯ್ | ೧-೧೫೦ | ಮಾವಿನಕಾಯಿಯ ಮಾಟದ ಒಂದು ಒಡವೆ |
| ಮಾಣ್ | ೪-೩೦ | ಬಿಡು, ನಿಲ್ಲಿಸು |
| ಮಾಸಾಳ್ | ೬-೨೨ | ನಾಯಕ, ಪರಾಕ್ರಮಿ |
| ಮಿಸುನಿ | ೫-೧೨೪ | ಚಿನ್ನ |
| ಮುಕುರ | ೩-೮೨ | ಕನ್ನಡಿ |
| ಮುಖವಾಸ | ೩-೧೬ | ಮುಖಕ್ಕೆ ಕಟ್ಟಿಕೊಳ್ಳುವ ಬಟ್ಟೆ |
| ಮುಗುಳ್ | ೨-೨೭, ೨-೬೩ | ಮೊಗ್ಗು |
| ಮುಂಗುಡಿ | ೬-೯ | ಮುಂಭಾಗ |
| ಮುಂಡಾಡು | ೩-೭, ೩-೫೨ | ಮುದ್ದಿಡು |
| ಮುರಜ | ೭-೧೦೫ | ಒಂದು ವಾದ್ಯ |

| | | |
|---|---|---|
| ಮೈಗರೆ | ೧-೧೦೭, ೭-೩೦ | ಅದೃಶ್ಯವಾಗು |
| ಮೈಯಿಕ್ಕು | ೧-೩೫, ೩-೯ | ನಮಸ್ಕರಿಸು |

## ಯ

| | | |
|---|---|---|
| ಯಕ್ಷಕರ್ದಮ | ೮-೮೭ | ಕರ್ಪೂರ, ಅಗುರು, ಕಸ್ತೂರಿ ಮೊದಲಾದ ಸುಗಂಧ ದ್ರವ್ಯಗಳನ್ನು ಸೇರಿಸಿ ಮಾಡಿದ ಅನುಲೇಪನ |

## ರ

| | | |
|---|---|---|
| ರಂಭ | ೧-೧೦೬ | ಬಾಳೆಯ ಗಿಡ |
| ರಾಘೆ | ೮-೮೮ | ತೊಡೆ |
| ರೋಮಜ | ೮-೧೩೭ | ಬ್ರಹ್ಮ (?); 'ರೋಮಶ' ಎಂಬುದನ್ನು ಹಸ್ತಪ್ರತಿಗಳ ಲೇಖಕರು 'ರೋಮಜ' ಎಂದು ತಪ್ಪಾಗಿ ಬರೆದಿರಬಹುದೆ? |

## ಲ

| | | |
|---|---|---|
| ಲಲ್ಲಿ | ೩-೫೬ | ಮುದ್ದು |
| ಲಹಣಿ | ೧೨-೮೪ | ಲಹರಿ, ಅತಿ |
| ಲೆಂಕ | ೬-೨೨, ೮-೭* | ಸೇವಕ |
| ಲೇಸು | ೮-೧೩೫ | ಸ್ವಲ್ಪಭಾಗ (ಸಂ. ಲೇಶ) |
| ಲೋಕಾಯತ | ೫-೧೪೨ | ನಾಸ್ತಿಕ |

## ವ

| | | |
|---|---|---|
| ವಾದು | ೧-೮೦ | ಮಾತು (ಸಂ. ವಾದ) |
| ವಾಯ | ೧೩-೨೪ | ನೆವ, ಹುಸಿ (ಸಂ. ವ್ಯಾಜ) |
| ವಿಸಂಚ | ೮-೫೧ | ಚಾಂಚಲ್ಯ (?) |
| ವೆಗ್ಗಳ | ೮-೧೦ | ಹೆಚ್ಚು |

## ಶ

| | | |
|---|---|---|
| ಶರಣರ್ಧಿ | ೭-೧* | ಸಂ. ಶರಣ + ಋದ್ಧಿ (ಋದ್ಧಿ = ಏಳಿಗೆ) |
| ಶಾಬಕ | ೧-೧೨೨ | ಮರಿ |

